# ಮುನ್ನುಡಿ

ಕಳೆದ ಹನ್ನೆರಡು ವರ್ಷಗಳಿಂದ ಬಂದ ಬೆಳೆಯ ಎರಡನೆಯ ಸಿವುಡು ಇದು—'ಹೃದಯಸಮುದ್ರದ' ಕವನಸಂಗ್ರಹ. ಇವುಗಳಲ್ಲಿ ಹಲವು ಪಾಂಡಿಚೇರಿಗೆ ಹೋಗುವಾಗ, ಅಲ್ಲಿರುವಾಗ, ಅಲ್ಲಿಂದ ಮರಳಿ ಬರುವಾಗ, ಅದರ ನೆನಪು ಆದಾದಾಗ ಬರೆದವುಗಳು. ಪ್ರಾರ್ಥನಾರೂಪವಾಗಿವೆ ಕೆಲವು; ಕೆಲವು ಅನುಭವವರ್ಣನಾರೂಪ; ಕೆಲವು ಅನುಭವ ಸಹಜನಿತವಾದವುಗಳು; ಕೆಲವು ಕಾಣ್ಕೆ, ಕೆಲವು ಕಣಸು–ಕನಸು, ಕೆಲವು ಧ್ವನಿಸುವ ಅನುಭಾವವು ವಾಚ್ಯ–ಅನಿರ್ವಾಚ್ಯದ ನಡು–ಸೀಮೆಗೆ ಸೇರಿದುದು. ಕನ್ನಡ ನುಡಿಗೆ ಅಸಂಭಾವ್ಯವಾಗಿ ತೋರುವುದು ಇದರಲ್ಲಿ ಯಾವುದೂ ಇಲ್ಲ—ಎಂದು ನನಗೆ ತೋರುವುದು.

ಕವಿಜೀವನದಲ್ಲಿ, ವಸ್ತುನಿಷ್ಠೆ, ಆತ್ಮನಿಷ್ಠೆಗಳು ಹೃದಯನಿಷ್ಠೆಯಲ್ಲಿ ಒಗೆತನದ ಬಾಳ ನಡೆಸುವವು. ಕಾವ್ಯಾಸ್ವಾದನಕ್ಕೆ ಹೃದಯಾನುಭೂತಿ ಮೂಲಧನ. ಅದರ ಕ್ಷೇತ್ರದ ಹಿಗ್ಗು ಜೀವನದ ಸಾರ. ಹೃದಯದ ನೂರು–ಸಾವಿರ ತಂತಿಗಳಲ್ಲಿ ಒಂದಾದರೂ ಇಲ್ಲಿಯ ವಚೋವಿನ್ಯಾಸದಿಂದ, ಛಂದೋವಿಲಾಸದಿಂದ, ಧ್ವನಿಯ ತಾಂಡವಲಾಸ್ಯಗಳಿಂದ ಕಂಪಿತವಾದರೆ, ಅನುಕಂಪಿತವಾದರೆ ಇಲ್ಲಿಯ ವಾಣಿ ಸಾರ್ಥಕ. ಸ್ವಾನುಭೂತಿ ಮತ್ತು ಸಹಾನುಭೂತಿಗಳ ಸಂಪರ್ಕವ್ಯಾಪಾರದಲ್ಲಿ ಬರುವ ಪರಿಣತಿಯೇ ಇಲ್ಲಿಯ ಲಾಭ. ಅತಿವಾಸ್ತವತೆಯ ಸ್ಥೂಲ ದೃಶ್ಯಗಳಲ್ಲಿಯೇ ರಮಿಸುವ ಅಭ್ಯಾಸ ಬೆಳೆಸಿಕೊಂಡವರಿಗೆ ಇಲ್ಲಿಯ ಗಾಳಿ-ಬಯಲಾಟದೊಳಗಿನ ಅಂತರ್ಲಾಗ, ಜಂತರ್ಲಾಗಗಳಲ್ಲಿ ಕಲ್ಪನಾಚಮತ್ಕೃತಿಯಾಗಲಿ, ಅದರದೆ ವಿಕೃತಿಯಾಗಲಿ ಕಂಡರೂ ಅದೂ ನವೀನ ಬೋಧವೇ ಸರಿ. ಉಳಿದ ಮಾತು ಭಾವ–ಸಂದರ್ಭ–ಸೂಚಿಯಲ್ಲಿವೆ.

ಈ ಸಂಗ್ರಹ ಗೆ. ಡಾ. ಮುಗಳಿ ರಂಗನಾಥರಾಯರ ಕಾವ್ಯಮಾಲೆಯ ಪ್ರಕಾಶನದಲ್ಲಿ ಬರುವದಿತ್ತು. ಬೇರೊಂದು ಸೌಕರ್ಯಕ್ಕಾಗಿ ಶ್ರೀ. ಭಾಲಚಂದ್ರ

ಘಾಣೇಕರ ಅವರೇ ಇದನ್ನು ಪ್ರಕಟಿಸುತ್ತಿದ್ದಾರೆ. ಶ್ರೀ. ಮೇವುಂಡಿ ಮಲ್ಲಾರಿಯವರು ಇದರ ಶುದ್ಧಲಿಪಿ ಸಿದ್ಧಪಡಿಸಿದರು. ಪ್ರೊ. ದಿವಾಣಜಿ, ಪ್ರೊ. ಕೆರೂರ, ಚಿ. ವಾಮನ ಬೇಂದ್ರೆ ಇವರು ಈ ಸಂಗ್ರಹವನ್ನು ಒಂದು ರೂಪಕ್ಕೆ ತಂದರು. ಅವರೆಲ್ಲರಿಗೂ ನನ್ನ ಕೃತಜ್ಞತೆಗಳು.

'ಹೃದಯ ಸಮುದ್ರ' ಹಿಂದೆಯೇ ಪ್ರಕಟವಾಗಬೇಕಾಗಿತ್ತು. ಆದರೇನು ? 'ಬರುವದೇನುಂಟೊಮ್ಮೆ ಬರುವ ಕಾಲಕೆ ಬಹುದು'—ಈಗ ಬಂದಿತು. ಅದೂ ಶ್ರೀಗುರುಪ್ರಸಾದವೇ !

೧೪-೬-೫೬ ದ. ರಾ. ಬೇಂದ್ರೆ
ಧಾರವಾಡ



# ಅರ್ಪಣ

ಶ್ರಾವಣದಲ್ಲಿ, ಗುರಚರಣಲೀನರಾದ, ಅಮ್ಮಣಿಗೆಯ

ಗೆಳೆಯ **ಶಂಕರಗೌಡ ಪಾಟೀಲ** (ಪಾಂಡಿಚೇರಿ)

ಮತ್ತು

ಸಿರಿಯಾಳಷಷ್ಠಿ, ಅಗಸ್ಟ-೧೫, ಗುರುಜಯಂತಿ ದಿನ, ದೇಹವಿಟ್ಟ

ಗೆಳೆಯ **ಚೆನ್ನಮಲ್ಲಪ್ಪ ಗಲಗಲಿ** (ಹಲಸಂಗಿ)

ಇವರಿಬ್ಬರ ಅಮೃತಸ್ನೇಹಸ್ಮೃತಿಗೆ.

**ಬೇಂದ್ರೆ ದತ್ತ ರಾಮ**

೧೯೫೬
ಧಾರವಾಡ

# ಪ ರಿ ವಿ ಡಿ

ಕವನ





# ಹೃದಯಸಮುದ್ರ

ಬಂಗಾರ ನೀರ ಕಡಲಾಚೆಗೀಚೆಗಿದೆ ನೀಲ ನೀಲ ತೀರಾ.
ಮಿಂಚುಬಳಗ ತೆರೆತೆರೆಗಳಾಗಿ ಅಲೆಯುವದು ಪುಟ್ಟಪೂರಾ.
ಅದು ನಮ್ಮ ಊರು, ಇದು ನಿಮ್ಮ ಊರು, ತಂತಮ್ಮ ಊರೊ ಧೀರಾ
ಆದರೊಳಗೆ ನಾವು, ನಮ್ಮೊಳಗೆ ತಾವು, ಅದು ಇಲ್ಲವಣ್ಣ ದೂರಾ.

ಕರೆ ಬಂದಿತಣ್ಣ, ತೆರೆ ಬಂದಿತಣ್ಣ, ನೆರೆಬಂದಿತಣ್ಣ ಬಳಿಗೆ.
ಹರಿತಂದ ಭಾವ, ಜರಿತಂದ ಜೀವ ಆದರೊಳಗೆ ಒಳಗೆ ಒಳಗೆ.
ಇದೆ ಸಮಯವಣ್ಣ ಇದೆ ಸಮಯ ತಮ್ಮ ನಮ್ ನಿಮ್ಮ ಆತ್ಮಗಳಿಗೆ.
ಅಂಬಿಗನು ಬಂದ ನಂಬಿಗನು ಬಂದ ಬಂದಂದ ದಿವ್ಯ ಗಳಿಗೆ.

ಇದು ಉಪ್ಪುನೀರ ಕಡಲಲ್ಲೊ ನಮ್ಮ ಒಡಲಲ್ಲು ಇದರ ನೆಲೆಯು.
ಕಂಡವರಿಗಲ್ಲೊ ಕಂಡವರಿಗಷ್ಟೆ ತಿಳಿದಂದ ಇದರ ಬೆಲೆಯು.
ಸಿಕ್ಕಲ್ಲಿ ಅಲ್ಲ ಸಿಕ್ಕಲ್ಲೆ ಮಾತ್ರ ಒಡೆಯುವದು ಇದರ ಸೆಲೆಯು.
ಕಣ್ಮರಳಿದಾಗ ಕಣ್ ಹೊರಳಿದಾಗ ಹೊಳೆಯುವದು ಇದರ ಕಳೆಯು.

ಬಂದವರ ಬಳಿಗೆ ಬಂದಂದ ಮತ್ತು ನಿಂದವರ ನೆರೆಗು
ಒಂದಂದೋ ಒಂದಂದ.
ನವಮನುವು ಬಂದ ಹೊಸ ದ್ವೀಪಗಳಿಗೆ ಹೊರಟಾನ ಬನ್ನಿ
ಅಂದಂದೋ ಅಂದಂದ

# ಶ್ರೀ ಅರವಿಂದರಿಗೆ

ನಿನ್ನಾ ಹುಬ್ಬಿನ ಇಬ್ಬದಿ
ಗರಿ ಚಾಚಿದೆ ಗರುಡ.
ಬಾನ್ಗಣ್ಣಾಗಿಹೆ ನೀ. ನಾ
ಗುರಿಯಿಲ್ಲದ ಕುರುಡ.

ಕಣ್ಣೆವೆ ಚಾಟಿಗೆ ಕಟ್ಟಿದೆ
ಆನಂದದ ಹುಟ್ಟು.
ಒಳಗಿದೆ ಹೂವರಳಿದವೊಲು
ವಿಶ್ವದ ಇಡಿಗುಟ್ಟು.

ಕೊಡು ತಂದೇ, ಇನ್ನೊಂದೇ
ಒಂದೇ ಬಾಯ್ಮುಟುಕು.
ಕೊಡು ತಾಯೇ, ಇನ್ನೊಮ್ಮೇ
ಒಮ್ಮೇ ಎದೆಗುಟುಕು.

# ಶ್ರೀಗುರುವೆ!

ಶ್ರೀಗುರುವೆ ಅರುವೆ, ಶರಣಾಗಿ ಬರುವೆ, ಕರುಣೆಯನು ಕೋರಿ ಬರುವೆ.
ಹೃತ್‌ಪ್ರಕೃತಿ ತಂದ ಕಿಡಿಹೂವುಗಳನು ಶ್ರೀಚರಣಕೆರೆಯುತಿರುವೆ.

ಆ ಪಾದಪದ್ಮ ಎದೆಗವಚಿ ಹಿಡಿದು ನಡುನೆತ್ತಿಗೆತ್ತಿಕೊಂಬೆ.
ಉಸಿರಿಂದಲದನೆ ಬಲಗೊಂಬೆ ನನ್ನ ಕಣ್‌ಗೊಂಬೆಗೊತ್ತಿಕೊಂಬೆ.

ಕಣ್ಣಿಂದ ನಿನ್ನ ನನ್‌ ಕಣ್ಣ ಸೇರಿ ಎದೆಯೊಳಣ ಬೆಳಕನೆತ್ತಿ,
ತಿರುಮೂರ್ತಿ ಮಾಡು ನನ್ನನ್ನು ನಿನ್ನ ಚಿನ್ಮೋದ–ಬೋಧ ಬಿತ್ತಿ.

ಭವಭವಕೆ ನನ್ನ ಮುಂದೆತ್ತಿ ಒತ್ತಿ ತಂದಂಥ ತಂದೆ ನೀನು.
ಭಾವಕ್ಕೆ ಇಳಿದು ಸದ್ಭಾವ ಬಲಿಸಿ ಬರುವಂತೆ ಮಾಡು ನಾನು.

ಅಂತರ್ಯದೊಂದು ಚೈತನ್ಯ ನಿನ್ನ ಕೈಂಕರ್ಯ ಕರ್ತೃವಾಗಿ
ಕ್ಷೇತ್ರಜ್ಞ ಬರಲಿ ಚೈತ್ಯೇಶನಾಗಿ ಮಧುಬೋಧ ಮೋದ ಮಾಗಿ.

ಹೇ ಭವನೆ ಶಿವನೆ, ಜವನವರ ಜವಕೆ ಶವವಾಗದಂತೆ ಮಾಡು
ಆ ಅಮೃತದೃಷ್ಟಿಯಲಿ ದಿವ್ಯ–ಸೃಷ್ಟಿಯಲಿ ನೆರೆದು ತೆರೆದು ನೋಡು.

# ನಾನಲೆಯುತಿದ್ದೆ

ನಾನಲೆಯುತಿದ್ದೆನೋ ಬಗೆಯ ಬಾನ ಕೆಂಬೆಳಕು–ನಸುಕಿನಲ್ಲಿ,
ಕಿರಿಮರೆವು ನೆನೆವು ಅರೆಬೆರೆತು ತೆರೆದ ಹೊಸಬಾಳ ಮುಸುಕಿನಲ್ಲಿ.
ಎದೆಹೂವಿನುಸಿರ ನರುಗಂಪಿನೊಂದು ನಸುಸುಳಿಯು ತೇಲುವಂತೆ,
ಒಳಚಿತ್ತವರಳುತಿರೆ ಕಾಯುತಿದ್ದೆ ನಿಶ್ಚಿಂತ ಚಿಂತೆಯಂತೆ.

ಆಃ ನೀನು ಬಂದೆ ತನಿಮಿಂಚಿನುರುಳಿ ತನ್ನನ್ನೆ ತೂಗುವಂತೆ,
ಕಡುಕಾದ ನೈಯು ತಡವರಿಸಿ ಮಮತೆ ನಿದ್ದೆಯಲಿ ತಾಗುವಂತೆ,
ಆ ನಮ್ಮ ನಿಮ್ಮ ಒಪ್ಪಂದದೊಪ್ಪ ಕಣ್ತೆರೆದು ಇಣುಕುವಂತೆ,
ನನ್ನಲ್ಲಿ ಏನೊ ಮಿಸುಗುತ್ತಲಿಹುದು ಬಾನ್ಮೀನ ಮಿಣುಕುವಂತೆ.

ಮಾತಾಡುವಂತೆ ನಗೆಗಣ್ಣು ತುಳುಕೆ ನಾನೆಲ್ಲೊ ನೋಡಿದಂತೆ,
ಎನಿಸುವದು; ಚಿತ್ತ ನೆನೆಸುವದು ಎಂದೊ ನೀನೊಮ್ಮೆ ಹಾಡಿದಂತೆ;
ಆ ಪಲ್ಲವಿಯನೆ ಗುಂಗುಣಿಸಿ ನುಡಿಯನೊಂದೊಂದು ಕಟ್ಟಿದಂತೆ
ಮನವೇರುತಿಹುದು; ಮುವ ಬೀರುತಿಹುದು ಬಾನಟ್ಟ ಮುಟ್ಟಿದಂತೆ.

ನೀನೆಲ್ಲೆ ಇರಲಿ ನಾನಿಲ್ಲೆ ಇರಲಿ ನೈಗಿರಲಿ ಎಲ್ಲೆಗಿಲ್ಲೆ.
ಆ ಸಾವುನೋವಿನೊಳತೋಟಿಯೇಕೆ? ಇದ್ದಲ್ಲೆ ಎಲ್ಲವಿಲ್ಲೆ ?

# ಶ್ರೀಗುರು-ಕರುಣ-ಚರಣ

ಒಳಒಳಗಿನೊಳಗೆ ತನು ಮಿಂಚಿ ತೊಳಗೆ ಹುಸಿ ಬಯಲೆ ಹೊತ್ತಿ ಬೆಳಗೆ.
ಮೂಡಣವು ಇಲ್ಲ ಪಡುವಣವು ಇಲ್ಲ ಅದಕಿಲ್ಲ ಮೇಲೆ ಕೆಳಗೆ.
ತನಿರನ್ನಮೊಂಧು ಕೆಂಗಿಡಿಯ ಕುಡಿಯೆ ಸಿಡಿದರಳಿ ಉರುಳಿದಂತೆ
ನೆಲ ಕಾಣದೊಂದು ಹಗಲಿಹುದು ಇಲ್ಲಿ ನವಮುದವೆ ಹೊರಳಿದಂತೆ.

ಸ್ವೈರಣೆಯ ಸಿರಿಯ ರೇಸಿಮೆಯ ಎಳೆಯ ನಯವಾದ ಹಾಸಿನಲ್ಲಿ
ಒರಗಿರುವ ಕಣ್ಣು ತೆರೆದಿರುವ ಹುಸಿಯೆ ನಗುತಿರುವ ಕೂಸಿನಲ್ಲಿ
ಕಂಡೊಂದು ಅಂದ ತಾಯನ್ನೆ ನಂಬಿ ತುಂಬಿರುವ ಬಿಂಬವಾಗಿ
ಸೆಲೆಯುವಮ ಹುದುವನೊಳಗೊಂಡು ತಾನೆ ತಿಳಿಯಾಗಿ ಗುಂಭವಾಗಿ.

ಇದು ಯಾವ ದೆಸೆಯೊ, ಹೆಸರೇನು ಇದಕೆ, ಇದಕಿಲ್ಲ ಹಾದಿ ಹೊರಗೆ.
ಇಲ್ಲಿಂದ ಆದಿ, ಇದು ತಾನನಾದಿ, ಇದಕೇಕೆ ಬೆಡಗು ಬೆರಗೆ ?
ಇಲ್ಲಿಹುದು ನಾನೆ ನಾನಾದ ತಾನೆ ತಾನೆಂಬ ತನ್ನತನವು.
ಇದು ಗುಪ್ತಧನವು ನಿಃಸ್ತಬ್ಧ ಮನವು ಇದು ಪೊಳ್ಳು, ತುಂಬು, ಘನವು.

ಏನದರ ಮಹಿಮೆ ! ನೆಲಸಿಹುದು ನೋಡ ಗುರುಕರುಣಚರಣದಂತೆ,
ಹಿಮಶಿಖರದಲ್ಲಿ ಕುಡಿಗೊಂಡ ಶಾಂತ ತಂಗದಿರ ಕಿರಣದಂತೆ.

# ಅರವಿಂದನಾಭನ ಪಾದಾರವಿಂದಕ್ಕೆ

ಆರವಿಂದನಾಭನ ಪಾದಾರವಿಂದಕೆ ಹಸ್ತಾರವಿಂದವು ಬಾಗುತಿರೆ.
ನಯನಾರವಿಂದವು ಮುಚ್ಚಿಕೊಂಡಿರುವಾಗ ಹೃದಯಾರವಿಂದವು ಅರಳಲಿರೆ
ಆಸ್ಯಾರವಿಂದವು ನಲಿವನು ಸೂಸುವ ತೆರ ನಿನಗೆ ಸೂಸಲಿ ಮಂಗಲವು
ಎಂದಿತು ಅರವಿಂದ ಪದಭೃಂಗ ಅರವಿಂದು! ಅರವಿಂದಮಯವಾದ ಮಾನಸವು.

# ಚಿತ್ತಭಿತ್ತಿಯ ಚಿತ್ರ

ಚಿತ್ತಭಿತ್ತಿಯಲಿ ಚಿತ್ರಬರೆಯುವ ವಿಚಿತ್ರ ಪುರುಷನಾರು ?
ನೋಡನೋಡುತಿರೆ ಜಡವೆ ಜಲದವೊಲು ತೆಳ್ಳನಾರುಪಾರು.
ಕುಣಿವ ಕಣಗಳಲಿ ತೆರೆವ ಅಣುಗಳೊಳು ಬೇರೆ ಏರುಪೇರು.
ಬಣ್ಣ ಒಡೆಯುತಿವೆ ಕಣ್ಣ ಪಡೆಯುತಿದೆ ಸಣ್ಣ ಕನ್ನನಾರು.
ಚಿತ್ತಭಿತ್ತಿಯಲಿ ಚಿತ್ರಬರೆಯುವ ವಿಚಿತ್ರ ಪುರುಷನಾರು ?

"ನಮ್ಮ ನಿಮ್ಮ ಗುರುತಿತ್ತೊ ಮೊದಲು? ಬಂದಿಲ್ಲಿ ಗುರುವಿನಂತೆ
ಕುರುಡುಗೊಂಬೆಗೇ ಕಣ್ಣುಬರೆದೆ ತಿಳಿಗೊಂಡ ಕುರುಹಿನಂತೆ.
ಓ ತಾಯಿತಂದೆ ಶಿವನೆಂದೆ ನಿಮಗೆ ಕರುಗೊಳುವ ಅರುವಿನಿಂದೆ
ನೀವಿತ್ತ ಪಾಲು ನಮಗದುವೆ ಹಾಲು ಕರುಳಾಯ್ತು ಕರುವಿನಂತೆ."

ಈ ಪುಷ್ಟಿ ತುಷ್ಟಿ ಹೊರಹೊಮ್ಮಿ ಚಿಮ್ಮಿ ನೆರೆನಂಬಿ ಗೊಂಬೆಯಾಗಿ.
ಪೊಸ ಜಗದ ಯುಗದ ಚವಲಂಬ ತೆರೆದು ಕರೆಯುವದು ಅಂಬೆಯಾಗಿ.
ಒಳಗಿದ್ದ ಗಂಟು ಅರಳುತ್ತಲಿಹುದು ಪೊಸಬಾಳ ಗಂಟೆಯಾಗಿ.
ಗಣಗಣನೆ ಬಂತು ಅಗಣಿತದ ಅಲೆಯು ಹೂಹೂವ ಕಂಟೆಯಾಗಿ.

# ಗುರು ನೆನೆದರೆ

ಗುರು ನೆನೆದರೆ ಸ್ಪಂದಿಸುತಿಹ
ನರ್ತಕಿ ಬಾ ಕುಣಿಯೆ.
ನನ್ನೀ ಹೃದ್ರಂಗದ ಜವ–
ನಿಕೆ ತೆರೆ ಚಿನ್ಮಣಿಯೆ.

ಅಂತಃಪುರದೊಳು ಕೇಳಿಸು–
ತಿದೆ ನೂಪುರ ನಾದ.
ಏತರ ಒಸಗೆಯು ಇದು ? ಯಾ
ಹಿಗ್ಗಿನ ಪಡಸಾದ ?

ಗಂಟೆಯ ನಾಲಗೆಯಂದದಿ
ಕರೆಯುವದಿದು ಗುಡಿಗೋ ?
ಅಮೃತಾ–ನಾಡಿಯ ಸೂತ್ರಕೆ
ಕುಣಿಯುವ ನಿನ್ನಡಿಗೋ ?

# ಮಹಾಪ್ರಸ್ಥಾನ

ಅಗೊ ಜೀವ ಸ್ಫೋಟ ಆ ಸೋಮವಾರದಾ ಮಧ್ಯರಾತ್ರಿಯಲ್ಲಿ.
ಆಕಾಶಗಂಗೆ ಅಭಿಷೇಕ ಮಾಡಿ ಕೈಲಾಸ ಜಾತ್ರೆಯಲ್ಲಿ.
ಮಧುವೇದವಾಣಿ, ಮಧುರಾಜರಾಣಿ ನಕ್ಷತ್ರಪುಂಜ ಕರೆಯೆ
ಓಂಕಾರವೆದೆಯೆ ಝೇಂಕರಿಸಿದಂತೆ ನವಜೀವರಾಶಿ ಮೊರೆಯೆ.

ನಾರಾಯಣಾಸ್ತ್ರ ಎಸೆದಂತೆ ಮೆರೆಯೆ ವಿಜ್ಞಾನಚಕ್ರದಲ್ಲಿ
ನವನೀತ ತೇಲೆ, ಘನಮನದ ಮೇಲೆ, ಸುರಮಥನ ತಕ್ರದಲ್ಲಿ
ಸಾವಿತ್ರ ಮಂತ್ರ ಯಮತಂತ್ರವನ್ನೆ ಸಂಯಮಿಸಿ ಅಮಲವಾಗಿ
ನಚಿಕೇತ ಅಗ್ನಿ ವಿಚಿಕೇತಿಸಿತ್ತು ನವಕಮಲ ಕಮಲವಾಗಿ.

ಪಾತಾಳ ಶೇಷಮಸ್ತಕದ ಮಣಿಯೆ ಇಗೊ ಸ್ವರ್ಣಗರುಡನಾಗಿ
ದಿಗ್ದಂತಿ ನಾಗ ನೆಗೆದಂತೆ ಮೇಗೆ ಪಾರದದ ಹಂಸವಾಗಿ
ಯೋಗೇಶನಿಂದ ಧನುಧಾರಿಯಲ್ಲಿ ಅನಿಮೇಷ ಭೇದವಾಯ್ತು.
ಸುರವ್ಯಾಧನಯನದಾದರ್ಶವಾದ ಮೃಗಶೀರ್ಷ ವೇಧವಾಯ್ತು.

ಆದಿತ್ಯಶಕ್ತಿ ಚಂದ್ರಮನ ಹೊಂದಿ ಕೌಮುದಿಯೆ ಭ್ರಮಿಸುವಂತೆ
ಸಾವಿರದ ಸೂರ್ಯ ನಕ್ಷತ್ರರಾಗಿ ತಮವನ್ನೆ ಶಮಿಸುವಂತೆ
ಶ್ರದ್ಧೆಯಲಿ ಶಿರವು, ಋತಸತ್ಯದರಿವು, ಎದೆ ಯೋಗ ಸಾಕ್ಷಿಯಾಗಿ
ಮಾಸೃಷ್ಟಿಯಿಂದ ಬರುತಿಹವು ಚೆಂದ ಶಿವಪಕ್ಷಿ ಪಕ್ಷಿಯಾಗಿ.

ಕಳೇವರದ ನೀರಲ್ಲಿ ಶಾರದೆಯ ದೀಪ್ತಿ ತೊಳಗುತಿಹುದು.
ಹಣತೆ ತುಂಬ ನೇಹದಲಿ ನಗೆಯ ಹೂಬತ್ತಿ ಬೆಳಗುತಿಹುದು.
ಎದೆಯ ಹಾಲಿನಲಿ ಬಗೆಯ ಸಕ್ಕರೆಯ ಹರಳು ಕರಗುತಿಹುದು.
ತೇಜದಲ್ಲಿ ತಮ ಶಮಿಸಿ ಸೋಮ ರಸಿಕತೆಯೊಳಗುತಿಹುದು.

ದುರ್ಬಲತೆ ಸುಳ್ಳು, ಹುಸಿಯಾಸೆ ಜೊಳ್ಳು, ಸಾವೊಂದು ಪೊಳ್ಳು ಬದುಕು.
ಬಯಲಾಯ್ತು ಬಸಿರು, ಒಲವಾಯ್ತು ಹಸಿರು, ಕುಸುರಾಯ್ತು ಅದಕು ಇದಕು.
ನವಧರ್ಮಮೇಘ ಘನಘೋಷಗೊಂಡು ಅವತರಿಸಿ ದೇವ ವೃಷ್ಟಿ,
ಸುಕ್ಷೇತ್ರದಲ್ಲಿ ಮೊಗದೋರಲುಂಟು ಆನಂದಮೊಂದು ಸೃಷ್ಟಿ.

ಆ ಜ್ಞಾನದಾಚೆ ವಿಜ್ಞಾನ ಉದಯವಿದೆ ಗಂಟೆ ಬಾರಿಸಿತ್ತು.
ಚಾತುರ್ಥ ಸರ್ಗ ನೈಸರ್ಗ ಮಾರ್ಗ ಡಂಗುರವ ಸಾರಿಸಿತ್ತು.
ನೆರೆತೆರೆಯಲುಂಟು ಸೌಂದರ್ಯಸತ್ವ ಸಜ್ಜನಿಕೆ ಇರುವ ನೆಲೆಯು,
ಸಿರಿಮನದ ವೈಭವದಿ ಮುಗಿಯಲಿಲ್ಲ ಈಶ್ವರನ ಸೃಷ್ಟಿ ಕಲೆಯು.

ಎಂತು ಬಂತೊ ಜಡದಿಂದ ಪ್ರಾಣ ಉದ್ಭಿಜ್ಯ ಸ್ವೇದವಾಗಿ
ತರುಮರವು ಆಗಿ, ಕ್ರಿಮಿಕೀಟವಾಗಿ, ಪಶುಪಕ್ಷಿ ಭೇದವಾಗಿ ?
ಪಾಶವಿಕ ಗ್ರಂಥಿ ಬಿಡಿಸಿತ್ತು ಎಂತೊ ಮಾನವ್ಯದೊಂದು ರೀತಿ ?
ಮಾನವನ ಹೃದಯವನೆ ಯೋನಿಗೊಳಿಸಿ ಬರಲಿಹುದು ದೇವಜಾತಿ.

ಈ ದೇಹವಿರಲಿ ಇಗೊ ತರುವೆ ಅಮೃತ ಹೃತ್ಕಲಶಪಾಣಿಯಾಗಿ.
ಬಾನುಲಿಯ ಕ್ಷೇತ್ರ ಸಿಡಿಲೆಂದು ಮೊರೆಯೆ ಆಕಾಶವಾಣಿಯಾಗಿ,
ಅಹ ಅರುಣಕಿರಣ ಆವರಣ ಹರಿವ ಸುಸ್ಫಟಿಕ ಕನಕದಂತೆ
ಅಗೊ ಎದ್ದ ಗೆದ್ದ ಋಷಿರಾಜ ತೇಜ ವೈದೇಹ ಜನಕನಂತೆ.

ತಾಪಾರ್ತ ಜನಕೆ ನೆರಳಾಗಿ ನೀಡಿ ವಟವೃಕ್ಷವಾದ ಜೀವ;
ತತ್ ಬ್ರಹ್ಮದಲ್ಲಿ ಬೇರ್ಬಿಟ್ಟು ಇಳಿವ ಅಶ್ವತ್ಥದಂಥ ಭಾವ;
ಧೀಪ್ರಳಯ ಜಲದಿ ತೇಲಾಡುತಿಹುದು ಅರಳಿಲೆಯಲೇನೊ ಒಂದು;
ತಾನಾಗಿ ನಾಳೆ ನವಜೀವಕೋಟಿಯನೆ ಮೆರೆಯಲಿಹುದು ಬಂದು.

ನವಜನ್ಮಯಜ್ಞ ಪರಿಪೂರ್ಣವಾಯ್ತು, ಅಜ್ಞಾನವಾಯ್ತು ಹವಿಯು.
ಅವಭೃತದ ಸ್ನಾನ ಈ ದೇಹದಾನ, ಗ್ರಹಮುಕ್ತನಾದ ರವಿಯು.
ಪುಷ್ಕರಿಣಿಯಲ್ಲಿ ಅರವಿಂದ ತತ್ತ್ವದವರೋಹವಾಗಿ ಸಾರ್ಥ,
ಶ್ರೀಮಾತೆಯುವರ ಗುರುಪಾದವಾದವ್ರೋ ವಿಶ್ವಯೋಗತೀರ್ಥ.

ಅರವಿಂದವೆಂಬ ಬರಿ ಹೆಸರಿನಲ್ಲೆ ಸೌಗಂಧ ತುಂಬಿ ಬಹದು.
ಚಾರಿತ್ರ್ಯವನ್ನು ನೆನೆಸಿದರೆ ಸಾಕು ಬ್ರಹ್ಮಾಂಡ ಬಿಂಬಿಸುವದು.
ಆ ಒಂದೆ ರಾತ್ರಿಯಲಿ ಬಯಲು ತುಂಬಿತೋ ಪಾರಿಜಾತ ಕೀರ್ತಿ.
ಈ ವಿಶ್ವದೊಡನೆ ಒಂದಾಗಿ ನಿಂತಿತೋ ಆ ವಿರಾಟ ಮೂರ್ತಿ.

ಪಾರ್ಥಿವದ ಗರ್ಭ ಭೇದಿಸುತ ಬಂತು ಅರ್ಭಕನ ಧ್ವನಿಯು ಒಂದು–
"ವಾಮನನ ಮುಂದಿನಾ ವಾಮದೇವ ಕ್ರಮಯೋಗದಿಂದ ಇಂದು
ಶ್ರೀಕೃಷ್ಣ ಪಕ್ಷದಲಿ ಕಂಸರನ್ನು ಸಂಹರಿಸಿ ಮುಂದೆ ನಡೆದೆ.
ಅಮವಾಸೆ ಕಳೆದು ಚಿತ್ತಲೆಯು ತಳೆದು ಪೌರ್ಣಿಮೆಯ ಹಾದಿ ಹಿಡಿದೆ."

# ಶ್ರೀಮಾತೆಗೆ

ಮಾತುಗಳ ಮಾತೆ ನೀನುಃ
ಮಾತಿನಲಿ ಹೂತು ಬರಬಾರದೇನು ?
ಉಸಿರುಗಳ ಉಸಿರೆ ನೀನುಃ
ಉಸಿರಿನಲಿ ಹಸಿರಾಗಿ ಹರಿದೆ ನಾನು.

ಕಣ್ಣುಗಳ ಬಣ್ಣ ನೀನುಃ
ಉಣ್ಣಿಸೌ ತನಿಬೆಳಕು–ಹಣ್ಣು–ಜೇನು.
ಕಿವಿಗಳಿಗೆ ಕಿವಿಯು ನೀನುಃ
ಕೇಳಿಸಲಿ ಬಾನ ಸವಿಯಾದ ತಾನು.

ಬಗೆಯೊಳಿಹ ಜಗವೆ ನೀನುಃ
ಒಗುಮಿಗಿಸಿ ಬಾರೆ ಬಾ ಆಗಿ ಭಾನು.
ಜೀವದೊಳು ದೇವಿ ನೀನುಃ
ನೀನಗ್ನಿ ಸೋಮ ನೀ ಭಾನು ನೀನು.

# ಬರುವಳು ಬರುವಳು

ಬರುವಳು ಬರುವಳು ಬಂದೇ ಬರುವಳು
ಕಾದಿರಿ ಹಾಗೋ ಹೀಗೋ.
ನಸುಕಿನ ನಗೆಗಣ್ ಸೂಸುತ ಸುತ್ತೂ
ಈಗೋ ಇನ್ನಾವಾಗೋ.

ಕಿಟಕಿಯಲಿಣುಕುವ ನಗೆಮೊಗದಂತೆ
ತಾರೆಗಳಾಚೆಯ ನೀಲಿಮೆಯಂತೆ
ಹನಿಸದೆ ಬರಿ ಸುರಿಯುವಳು.
ಬೆಳ್ಳಿಯ ಕಿರಣಗಳೇರಿ
ಹೊನ್ನಿನ ಹಡಗವ ಸೇರಿ

ಜಡಿವಳು ಸುರಿವಳು ತೊರೆಯುವ ಕರುಳು
ಯಾರಾರದೊ ಬಗೆಯರಳಿ,
ಜೀವವು ನಕ್ಷತ್ರವನುಗುಳುವದು
ತೇಜಃಪುಂಜವು ಕೆರಳಿ.

# ಪಾದಪದ್ಮಕೆ ಪ್ರಾರ್ಥನೆ

ಕಂಡುದನೆ ನಾ ಕಂಡು, ಕೇಳಿದ ಕೇಳಿ, ಮರುಳಿಗೆ ಕುಣಿದೆ.
ಉಂಡು ಉಂಡುದ ತಿಳಿಯದೆಯೆ ನಾ ತಣಿಯದೇನೇ ದಣಿದೆ.
ಬೇರೆ ಏತಕು ಮಣಿಯೆ ನಾ ಇಗೊ ಬಂತು ತಿಳಿವಿನ ಗಳಿಗೆ.
ಮಣಿಹವೆಂದೇ ಮಣಿವೆನಮ್ಮನ ಪಾದಪದ್ಮಂಗಳಿಗೆ.

ಮೈಯೊಳಗೆ ಮರಸಂದು ಮಸಗಾಡಿದೆನು ಮಿಡುಕಿಗೆ ನಾನು.
ಮನದ ಬನದಲಿ ಬಿನದವಾಡಿದೆ ತನ್ನ ತಿಳಿಯದೆ ತಾನು.
ಬೆಣ್ಣೆ ಹಾಲಲಿ ಏಳುವಂದದಿ ಎತ್ತು ನಿನ್ನಾ ಬಳಿಗೆ.
ಅಡಿಗಡಿಗೆ ನಾ ಮಣಿವೆ ತಾಯಿಯ ಪಾದಪದ್ಮಂಗಳಿಗೆ.

ಕತ್ತಲಿಸಲೆತ್ತೆತ್ತು ಕಣ್ಣಿನ ಹಾಗೆ ಹೊತ್ತನು ತೆರೆದೆ.
ಅದುವು ಮಣ್ಣಿನ ಮರೆಗೆ ಅಡಗಲು ತಿಂಗಳನ ನೀ ಕರೆದೆ.
ಇಲ್ಲ ರವಿಶಶಿಯೆನಲು ಬಾನಲಿ ಚಿಕ್ಕೆ ಬಳ್ಳಿಯೊಳರಳಿ,
ಬೆಳಕು ತೋರಿದ ಪಾದಪದ್ಮಂಗಳಿಗೆ ಮಣಿವೆನು ಮರಳಿ.

ತೊಟ್ಟು ಹನಿ ರಸಕಾಗಿ ಹುಡುಕುವ ಹುಚ್ಚು ಹಿಡಿದಿಹ ಹುಳಕೆ
ಭ್ರಮರವೃತ್ತಿಯ ಬಿಡಿಸಿ ನುಗ್ಗಿಸು ಒಳಕೆ ಬೆಳಕಿನ ಕಳಕೆ.
ಅಳಿಗೆ ಕತ್ತಲು; ಹುಲಿಗೆ! ಹುಲುಸಿರಲಮ್ಮ ಬೆಳಕಿನ ಬೆಳೆಗೆ.
ಮಣಿವೆ ಬೆಳಗನೆ ತೋರಿ ಹರಿವ ಈ ಪಾವಪದ್ಮಂಗಳಿಗೆ.

ಬರಲಿ ಈ ಸಂಕ್ರಾಂತಿಯೊಳಗುತ್ಕ್ರಾಂತಿ ಜೀವದ ಕ್ರಾಂತಿ
ಭ್ರಾಂತಿಯಳಿಯಲಿ ಬರಲಿ ಕರಣದ ಶಾಂತಿ ಚೈತ್ಯವ ಕಾಂತಿ.
ನಿನ್ನ ಕರುಣಾಕಿರಣ ಚಿಗುರಲಿ ಒಣಗಿದೆನೆ ನಾ ಚಳಿಗೆ.
ಗಳಿಗೆಗಳಿಗೆಗೆ ಮಣಿವೆನೇ ನಾ ಪಾದಪದ್ಮಂಗಳಿಗೆ.

ಆಹ, ಸ್ವಾಹಾ ಎಂದೆ ಸ್ವಾಮಿನಿ ಬಂದೆ ತಂದೆಯ ತಂದೆ.
ಇನ್ನು ಸರ್ವಸ್ವವನು ನೀಡುವ ಬೆಂಕಿ ಹೊತ್ತಿಸು ಎಂದೆ.
ಚಿತ್ತದರವಿಂದದಲಿ ಹೊತ್ತಲಿ, ಮಣಿವೆ ಜೀವದ ತಳಿಗೆ.
ಚೈತ್ಯಮಂದಿರದಲ್ಲಿ ನೆಲೆಸಿದ ಪಾದಪದ್ಮಂಗಳಿಗೆ.

ಗಂಗೆಯಂದದಿ ಬಿಳಿದು, ತಿಂಗಳ ಬೆಳಕಿನಂದದಿ ಬಿಳಿದು.
ಕತ್ತಲೆಯ ಹಂದರಕೆ ಹಬ್ಬಿದೆ ಬಿತ್ತು–ಬೆಳಕೇ ಬೆಳೆದು.
ಮಿಂಚಿನಂದದಿ ಬಿಳಿದು, ಅರಿವಿನ ಅಂಚಿನಂದದಿ ಬಿಳಿದು
ತಾಯಿ ತವರಿನ ಪಾದಪದ್ಮಂಗಳಿಗೆ ಮಣಿವೆನು ಇಳಿದು.

ಒಂದೆ ಅಷ್ಟಕ ಬಂದ ಕಷ್ಟವ ನಷ್ಟಗೊಳಿಸಲಿ ತಾಯಿ.
ಬಯಕೆ ಸಿಂಪಿಯು ಹುಳುವು ಬಿಡುತಿದೆ ಸ್ವಾತಿಗಾಗಿಯೆ ಬಾಯಿ.
ತುತ್ತು ಮುತ್ತನು ನೀಡು ಸರಸತಿ ಲಕುಮಿ ಕಾಳಿಕೆ ಅಂಬೆ
ಪಾದಪದ್ಮಂಗಳಿಗೆ ಜೀವದ ಹಂಸನಾ ಬಲಗೊಂಬೆ.

# ಅದಿತಿ

ಇವಳು ರುದ್ರರ ತಾಯಿ, ವಸುಗಳ ಮನೆಯ ಮಗಳೀಕೆ,
ತಂಗಿ ಆದಿತ್ಯರಿಗೆ ಇವಳಮೃತಕ್ಕೆ ಬಸಿರೀಕೆ.
ದಿವ್ಯಜನ್ಮದ ಮಂತ್ರಜಾತದ ದೈವದುಸಿರೀಕೆ.
ಎಲ್ಲರಿಗು ಅವರಾಕೆ. ಅರಳುವ ಹವಣು ಹಗಲೀಕೆ !

ಪಾಶಮೋಚನೆ ಪಾಪನಾಶಿನಿ, ಬೇರೆ ಯೋಚನೆಯೇ
ನೀನೆ ಅರ್ಪಣತತ್ತ್ವದರ್ಪಣ, ಹುಸಿಯ ಯಾಚನೆಯೇ
ನಸುಕು ಮುಸುಕೋಸರಿಸಿ ಬಯಲಿಗೆ ಬರಲಿ ನೇಸರನು.
ನಮ್ಮನೀಶತೆ ಹರಿದು ಓಡಲಿ, ಮಾಡು ಈಶರನು.

ಶರಣು ಭಕ್ತಿಗೆ, ಶರಣು ಯುಕ್ತಿಗೆ, ಶರಣು ಪರಮುಕ್ತಿ !
ತೊರೆದು ವಿಷಯಾಸಕ್ತಿ, ತೋರಿ ವಿರಕ್ತಿ, ಪರಭುಕ್ತಿ
ಹೊಳೆದು ನಮ್ಮನು ತೊಳೆದು ನಾಡಿಗೆ, ಇಳೆಗೆ ಇಡಿ ಇಳೆಗೆ
ಇಳಿದು ಬಾ, ಎಬ್ಬಿಸಲು ಬಾ, ದಿವ್ಯತೆಯೆ ಬೆಳೆ ಬೆಳೆಗೆ.

ಬಾರೆ ಭಗವತಿ ನಮ್ಮ ಜಗವತಿ ಕಾತರಿಸುತಿಹುದು.
ನಿನ್ನನೇ ನೆನೆನೆನೆದು ಜೀವವು ಚೇತರಿಸುತಿಹುದು.

# ಓ ತಾಯಿ-ಮಾಯಿ

‘ಓ ತಾಯಿ, ಮಾಯಿ, ಶಿವಜಾಯಿ, ಕಾಯಿ ನನ! ಯಾಕ ತೆರೆವೆ ಬಾಯಿಃ?
ಯಾ ಹಾದಿಲಿಂದ ನಾ ಹೋದರೇನು ಅಗ್ತೇನ ಅಲ್ಲೆ ನಾಯಿ.

ಪ್ರತಿರೋಮಕೂಪದಾಗ ಕಾಮ ತುಂಬಿ ತುಳಕ್ಯಾಡತಃದ ಇಲ್ಲಿ
ನೀ ಜಪ್ಪಿಸಿರಲು ನಿನ ತಪ್ಪಿಸ್ಯಾರೆ ನಾ ಹೋಗಬಲ್ಲೆನೆಲ್ಲಿ ?’

‘ಹಾಂಗಲ್ಲೊ ಮಗನ ನೀ ಭೋಗ ಬೇಡಿದಲ್ಲಲ್ಲು ಬಾಗಿಲಾಗಿ
ತೆರಿತಾವ ಹಾದಿ, ಅದಕಂತ ಕಾದಿ, ನಿನ ಮನಸೆ ಕನಸು ಆಗಿ..

ತೆರದೇನಿ ಯೋಗ ನಿನ ಹೃದಯದಾಗ, ಬರಲೊಲ್ಲ್ಯೊ ಬ್ಯಾಗ ಒಳಗ.
ಈ ಕಲಕುಮಲಕು ಆದಾಗ ನಿನಗ ನಡದಃದ ಮ್ಯಾಲ ಕೆಳಗ.

ಬಂದಾನ ಏನ ನನಕಂದ ಮನಿಗೆ ಇಂದಾರೆ ಅನತ ಮನಕ
ಎಂದಾರೆ ಬಾರೊ ಕಾದಿರುವೆ ಇಲ್ಲೆ ನೀನಾಗಿ ಬರುವ ತನಕ.

ಅಡ್ಡಡ್ಡ ಹಾದಿ ನೀ ಹೋದ ಮ್ಯಾಲೆ ನಾ ಕಾದೆನೆಷ್ಟೊ ನಿನಗಃ
ಹಾಲ್ ಹಸಿವು ಹುಟ್ಟಿದಾಗ ನೀನಃ ಬರತಿಯೋ ಚಿಂತಿ ಯಾಕ ನನಗಃ?

ಓಡ್ಯೋಡಿ ಹೊರಟೆ ಎಲೆ ಬಾಲ ! ಕಾಲ ನಿನ ನೋಡಿ ನೋಡಿ ನಗನಃ
ನಿನ ಕಾಲ ನೊತ್ತು ಬರುವಾಗ ಬಾರೊ ನನಗೊಂದೆ ಹಾದ್ಯೊ ಮಗನಃ.

ನನ ಬಣ್ಣ ನಿನ್ನ ಕಣ್ ಮ್ಯಾಲೆ ಎರಚಿ ಕಟ್ಟೇನೊ ಎಲ್ಲ ಹಾದಿ.
ನಿನ ಕಿವಿಗೆ ನನ್ನ ಸಿವಿದನೀ ಕಟ್ಟಿ ಬಿಟ್ಟೇನೊ ಎಲ್ಲಿ ಹೋದೀ !

ಆ ಗಾಳಿ ಜತಿಗೆ ನೀ ಗೂಳಿ ಹಾಂಗ ಅಡ್ಡ್ಯಾಡಿ ಹೇಳು ಏಸು?
ಮುಸುಗುಡುತ ಹೊರಟೆ ಬಯಲಾಗ-ನನ್ನ ಮುಗದಾಣ ಭಾಳ ಬೀಸು.

ನಾಡಾಡಿ ಹಕ್ಕಿ ನೀನಲ್ಲೊ ಮಗನ ಹೊಕ್ಕ್ಯಾಕ ಜೆಳ್ಳಕ್ಯಾಗ ?
ನಿನ ತಾಯಿ ಕಣ್-ಹನಿಮುತ್ತ ಸುರಸತಾಳ ಮಾನಸ ಕೊಳ್ಳದಾಗ.

ನಿನ ಹಸೀ ಹಸಿವಿಗೇ ಹೇಸಿ ನೀನೆ ಬಂದಾಗ ನನ್ನ ಮರಿಯೇ
ನನ ರುಚೀ ನಿನಗ ಶುಚಿ ಅನಿಸಿ ಹಸಿದು ಬಂದಾಗ ನಿನ್ನ ಮರಿಯೆ. '

'ಓ ಮಾಯಿ ಬಂದೆ ಓ ತಾಯಿ ಬಂದೆ ಓ ಕಾಯೆ ಕಾಯಿ ಬಂದೆ.
ನಿನ ಕಾಲ ನಾತ ಮೂಸಿಡುತ ಬಂದೆ ನಿನ ನಾಯಿಯಾಗಿ ಬಂದೆ.

ಒಳಬಳಕಿ ಜೆಳಸ ಹಸಿದೇನ ತಾಯಿ ಸಣ್ಣಕ್ಕಿ ತಳಸಬೇಕs
ಮೈಗಡಗಿ ತೊಳದು ಒಳಗಡಗಿ ಮಾಡ, ಬಾ ಅಡಗಿ ಕೂತಿಯಾಕs?

ಕೈತುತ್ತು ಮಾಡಿ ತುತ್ತುತ್ತ ಉಣಸುವಾಗ ಸುತ್ತು ಆಡಬೇಕs
ನಡುನಡುವೆ ನಕ್ಕು ಮುತಮುತ್ತ ಕದ್ದು ಕಣ್‌ಕುಡಿಲೆ ನೋಡಬೇಕs.

ನೀನು ಕೂಡ ಕೈಮರಿಗೆ ನಕ್ಕು ಕಣ್‌ಕೆಂಪು ಮಾಡಬೇಕು.
ಏ ಸುಳ್ಳ ಅಂತ ಅಪ್ಪಿದರ ತೊರಿದು ನನ ತಂಪು ಮಾಡಬೇಕು.

ಓ ತಾಯಿ ಬಂದೆ, ಮಾಮಾಯಿ ಅಂದೆ, ಈ ಬಾಯಿ ತುಂಬು ಒಂದೇ.

ಮಕರಂದ ಪಾನದಾ ಝರೀ
ತೆರೆತೆರೀ ನಿನ್ನ ತಾವರೀ
ಬಂದsದ ತುಂಬಿಯಾ ಮರೀ

ಅಂಬಿಕಾತನಯನ ನುಡೀ ನುಡಿತಾವ ತೆರಿ ತೆರೀ ಎಂದೇ
ಓ ತಾಯಿ ಮಾಯಿ ಶಿವಜಾಯಿ ಕಾಯಿ ಈ ಬಾಯಿ ತುಂಬು ಒಂದೇ.

# ಪ್ರತ್ಯಕ್ಷ

ಪ್ರತಿ ಅಕ್ಷ—ಎಂದರೆ ಕಣ್ಣಿಗೆ ಇದಿರಾಗಿ, ವಸ್ತುವಾಗಿ ಕಾಣುವದು—ಕಣ್ಣಿಗೆ ಪ್ರತ್ಯಕ್ಷ. ಹೀಗೆಯೆ ಬೇರೆ ಬೇರೆ ಇಂದ್ರಿಯಗಳಿಗೆ ಅವವುಗಳ ವಿಷಯ ಪ್ರತ್ಯಕ್ಷವೆ. ಕಿವಿಗೆ ಶಬ್ದ, ನಾಲಗೆಗೆ ರುಚಿ, ಮೈಗೆ ಸ್ಪರ್ಶ, ಹಾಗೆಯೆ ಮನಸ್ಸಿಗೆ ಸಂಕಲ್ಪಗಳು ವಿಕಲ್ಪಗಳು ಪ್ರತ್ಯಕ್ಷ. ಬುದ್ಧಿಗೆ ಅದರ ಆ ಆ ಕಾಲದ ನಿಶ್ಚಯವು ಪ್ರತ್ಯಕ್ಷ. ಅಹಂಕಾರಕ್ಕೆ ತನ್ನ ದೇಹಾತ್ಮಬುದ್ಧಿ ಪ್ರತ್ಯಕ್ಷ. ಚಿತ್ತಕ್ಕೆ ತನ್ನ ನೆನೆವು ಮರೆವು ಪ್ರತ್ಯಕ್ಷ. ಅಂತಃಕರಣಗಳಲ್ಲಿಯೇನು ? ಇಂದ್ರಿಯಗಳಿಗೇನು ?-ಒಂದು ದ್ವಂದ್ವ—ಸಂಧಿಪ್ರಕಾಶದಲ್ಲಿ ತನ್ನ ವಿಷಯಜ್ಞಾನವಾಗುತ್ತಿದೆ. ಎರಡು ಕಣ್ಣಿಗೆ ಕಾಣುವ ವಸ್ತು ಒಂದು, ಎರಡು ಕಿವಿಗೆ ಕೇಳಿಸುವ ಶಬ್ದ ಒಂದು. ಅವುಗಳಿಗೆ ದ್ವಿಧಾವೃತ್ತಿಯಿಲ್ಲ ಮೂಲತಃ. ಆದರೆ ಇಂದ್ರಿಯಾರ್ಥಗಳಂತೆಯೆ ಅಂತಃಕರಣಾರ್ಥಗಳೂ, ಕತ್ತಲೆ-ಬೆಳಕಿನ ಸಂತಾನ. ಕತ್ತಲೆ ಬಿರೆಯದ ಬೆಳಕಲ್ಲ ಅವು. ಶುದ್ಧಚಿತ್ತಕ್ಕೆಯೆ ಶುದ್ಧಸತ್ತ್ವದ ಪ್ರಕಾಶ ತೆರೆಯುವದು. ಈ ಪ್ರಕಾಶವ ಪ್ರಭುವಾಗಬೇಕಾದರೆ ಸತ್ತ್ವವನ್ನೂ ಅರಲಿನಂತೆ ಮಿದ್ದಿ ಮೂರ್ತಿ ಮಾಡಬಹುದಾದ ತತ್ತ್ವದ ಜಾಗೃತಿ ಬೇಕು.

ಮನೋನ್ಮನೀ

ಬಾರೆ ಬಾ ಮನೋನ್ಮನೀ
ಮಹಾಮನರ ಕಣ್ಮಣೀ
ನಿನ್ನ ಕಣಿಗೆ ನೀನೆ ಕುಣೀ
ದೇವದೇವ ನಿನ್ನ ಧಣಿ—
ಬಾರೆ ಬಾ ಮನೋನ್ಮನೀ.

ಹುರುಳಿನ ಅರಳರಳಿಸಿ
ಮಾಲೆ ಮಾಡಿ ಕೊರಳಿಸಿ
ಹೃದಯವೀಣೆ ಬೆರಳಿಸಿ
ಕುಣಿಸು ಜಗಕಲಾಪಿನೀ
ಬಾರೆ ಬಾ ಮನೋನ್ಮನೀ.

ಒಲವು ಬಳ್ಳಿಯಾಗಿರೆ
ಜೀವ ಅತ್ತ ಬಾಗಿರೆ
ನಿನ್ನ ಪಾದ ತಾಗಿರೆ
ತುಂಬು ವಿಶ್ವವಾಹಿನೀ
ಬಾರೆ ಬಾ ಮನೋನ್ಮನೀ.

ನಿನ್ನ ಪ್ರಾಣ ಅರ್ಪಿಸಿ
ಚೆಲುವನ್ನೇ ಮೂರ್ತಿಸಿ
ಬಯಕೆಗಳನು ಪೂರ್ತಿಸಿ
ಬರಲಿ ದೇವ–ದ್ವೀಪಿನೀ
ಬಾರೆ ಬಾ ಮನೋನ್ಮನೀ.

ಬಾಳಿನ ಒಡಲೊಳಿತಿಗೆ
ಭರತಿಯಾಗಲೊಮ್ಮಿಗೆ
ಪಯಣ ಬೆಳಿಸೆ ನೆಮ್ಮಿಗೆ
ಧ್ರುವವಾಗುತೆ ಕರೆಯೆ ನೀ
ಬಾರೆ ಬಾ ಮನೋನ್ಮನೀ.

ಒಕ್ಕೊರಲಿನ ಗೀತಿಗೆ
ಪ್ರೇರಕವಿಹ ರೀತಿಗೆ
ಜೀವನದೀ ನೀತಿಗೆ
ಸ್ವಚ್ಛಂದವಿಧಾಯಿನೀ
ಬಾರೆ ಬಾ ಮನೋನ್ಮನೀ.

# ದರ್ಶನ

ಜನ್ಮಜನ್ಮದ ಸುಕೃತವೇ ಬಾ
　　ನನಗೆ ಬೆಂಬಲವಾಗುತ;
ಜನ್ಮಜನ್ಮದ ದುಷ್ಕೃತವೆ ಬಾ
　　ಮಾತೃಚರಣಕೆ ಬಾಗುತ.

ಯುಗಯುಗದ ವಾತ್ಸಲ್ಯವೇ ಬಾ
　　ಹೊಮ್ಮಿ ಹೊನಲಲಿ ಹರಿಯುತ;
ದೈವಗರ್ಭದ ಕೃಪೆಯೆ ಬಾ ಬಾ
　　ಕರೆದು ಅಮೃತವ ಕರೆಯುತ.

** ** **

ಕಂಡಿಯಿಂದ ಕಂಡೇವೆ
　　ಕಣ್ ಕಾಣಿಕೆ ಎಂದು
ಜನ ಕಾದಿದೆ
　ಮನ ಕಾದಿದೆ
　　ಕಾದಿದೆ ತನುಬಿಂದು.

ಮೈ ಮಣ್ಣಿಗೆ
　ಕುಡಿಗಣ್ಣಿಗೆ
　　ಈ ಹಣ್ಣಿಗೆ
　　ರಸಗೂಡಿಸು ಬಂದು.
ರಣಘೋಷಕೆ
　ಆಕ್ರೋಶಕೆ
　　ಬೇಸತ್ತೆವು ಇಂದು.
ಬಾ ತಾಯಿಯೆ ಬಾರಾ
ಚಂದಿರ ಮುಖ ತೋರಾ.

# ತಾಯಿಗೆ ಪ್ರಾರ್ಥನೆ

ಒಮ್ಮಿದ್ದೆ ನೀನು, ಈಗಿಲ್ಲವೆಂದು ಹೇಗೆನಲಿ ತಾಯಿ ನಿನಗೆ?
ನೀನಿದ್ದರಿರುವೆ, ಇಲ್ಲದರೊಳಿಲ್ಲ ಹೀಗೆನುವೆ ನಾನೆ ನನಗೆ.
ನಿನ್ನಿಂದ ಬಂದೆ, ನಿನ್ನಲ್ಲಿ ಬೆಳೆವೆ, ನಿನ್ನೊಳಗೆ ಸಾಗುವಂತೆ
ತಾ ಹೊತ್ತಲೆಂದು ಬಂದಂಥ ಬತ್ತಿ ದೀಪಕ್ಕೆ ಬಾಗುವಂತೆ.

ನೀ ವೈಯನೊಂದೆ ರೂಪಿಸಿದೆಯೇನು ಬಸಿರಲ್ಲಿ ರಕ್ತ ಸುರಿದು?
ಹಸಿದಿರುವ ಬಾಯ್ಗೆ ನೀ ತಾಯೆ ಬಂದೆ ಹಾಲಾಗಿ ಎದೆಗೆ ಹರಿದು.
ಹಸು ಕರುವಿಗಾಗಿ ನಡೆದಂತೆ ದುಡಿದೆ; ನಡೆಗಲಿಸಲೆಂದು ದುಡಿಸಿ.
ಮುದ್ದಿಟ್ಟು ತುಟಿಗೆ ಮುದ್ದಾದ ಮಾತ ಮುದ್ರಿಸಿವೆ ಮನವ ನುಡಿಸಿ.

ಭ್ರಮಿ ನಾನು ಭ್ರಮರ; ನಿಃಶಂಕಿ ನೀನು. ಈ ಜಾತಶಂಕಿಯನ್ನು
ಶಮಿಯಾಗಿ ಶಮಿಸಿ, ನೀನಾಗಿ ಹೊಸೆದು ಹೊತ್ತಿಸಿದೆ ಬೆಂಕಿಯನ್ನು.
ದಮಿ ನೀನು, ನಾನು ದುರ್ದಮ್ಯ, ನಿನ್ನ ಕರುಣೆಯೊಳೆ ನನ್ನ ತೊಯ್ಸಿ
ಶ್ರಮಿ ನೀನು ನಿನ್ನ ಶ್ರಮ ಮಾಡಿಕೊಂಡೆ ಮೈಮುರಿಯೆ ನನ್ನ ಗೈಸಿ.

ನೀ ತೇಜಪುಂಜ, ನಾನೊಂದು ಚುಕ್ಕೆ, ಬಸಿರುಕ್ಕಿ ಹೊರಗೆ ಬಿದ್ದೆ.
ಇನ್ನೂನು ಭ್ರಮಣ ನಡೆದಿಹುದು, ತುಸುವು ಹರೆದಿಲ್ಲ ಹುಟ್ಟುನಿದ್ದೆ.
ಬಾನಗಲದಲ್ಲು ನನ್ನಗಲದಂತೆ ನನ್ನನ್ನು ಕೂಡಿಕೊಂಡು
ಹೊರಟಿರುವೆ ಎತ್ತೊ, ಬಿಡದೆನ್ನ ನಿನ್ನ ಆ ರಥಕೆ ಹೂಡಿಕೊಂಡು.

# ತಾಯ-ನಗೆ

ಏನು ನಗೆಯೆ ನಿನ್ನ ಮೊಗದ ಮೇಲೆ ಮೆರೆವುದು !
ಕಾಣದೊಂದು ಲೋಕವನ್ನೆ ಕಣ್ಣಮುಂದೆ ತೆರೆವುದು;
ಏನು ಚಿತ್ರ ಇದು ವಿಚಿತ್ರ ಚಮತ್ಕಾರವಾಗಿದೆ;
ನನ್ನ ಕುಡಿಮ ಕಣ್ಣಿನಿಂದ ಒಳಗೆ ಹೊಗುವ ಹಾಗಿದೆ.

ಹಾಳೆಯಲ್ಲ; ಬಾಳೆ ಇಲ್ಲಿ ಬೆಳಕುದುಂಬಿ ಬಂದಿದೆ;
ಗೊಂಬೆಯೇ? ಸಜೀವ ಬಿಂಬ ಅರಿವು ತುಂಬಿ ನಿಂದಿದೆ;
ಶಾಂತಿನಿಧಿ ಗಭೀರಮೌನ ಇಲ್ಲಿ ಕಣ್ಣ ತಾಳಿದೆ;
ಮುಚ್ಚಿದೆರಡು ತುಟಿಗಳಲ್ಲಿ ಅರ್ಥವೆಲ್ಲ ಹೂಳಿದೆ.

ನೇಹವೆರೆದು ಏನೊ ತೆರೆದು ಭಾವ ಹೊತ್ತಿದಂತಿದೆ;
ಆಳದೊಳಗೆ ಏನೊ ಒಂದು ಪೊಚ್ಚಮುತ್ತಿನಂತಿದೆ;
ತೆರೆಯೆ ಮರೆಯು, ಮರೆಯೆ ತೆರೆಯು, ಇದರ ಮಾಟ ಹೀಗಿದೆ.
ಕಂಡೆನೆಂಬ ಒಂದು ಕನಸು ಎಲ್ಲೊ ಮಾಯವಾಗಿದೆ.

ಸಾವಿನೊಂದು ಪೊರೆಯ ತೊರೆದ ಜೀವ ಮೆರೆಯುವಂತೆಯೆ
ನೋವು ಗೀವು ಸುಳ್ಳು ಎನಿಸಿ ಹಿಗ್ಗು ಹರಿಯುವಂತೆಯೆ
ಇರವಿನೊಂದು ಸುಳಿಯ ಒಳಗೆ ಬೇರೆ ಸಿರಿಯು ತೆರೆವುದು;
ಇಲ್ಲವೆನಿಸಿದೊಂದು ಬಾಳ ಅಹುದೆನುವೊಲು ಕರೆವುದು.

ನಿನ್ನ ನಗೆಯ ಬೆಳಕಿನಲ್ಲಿ ಜಗಕೆ ಬೇರೆ ಬಣ್ಣವು
ಬರಲು; ನನ್ನ ಜೀವನಯನ ಬೇರೆ ಉಣಿಸನುಣ್ಣವು.

# ದಿ ಮದರ್

It is through the Mother that all things are attained.

( ಎಲ್ಲ ಸಿದ್ಧಿಗಳು ಮಾತೆಯ ಮೂಲಕ. )

Sri—Aurobindo

ಮಾಯೆಯನೆ ಮೊಲೆಗೊಳಿಸಿ ಹಾಲ್ಗುಡಿಸಿ
ಈ ತಾಯಿ ಗಾಯತ್ರಿ ಮಂತ್ರಕ್ಕೆ ಭಾಷ್ಯ ಬರೆದವಳು
ಅಶ್ವಪತಿಯ ಉಪಾಸ್ಯ ದೇವತೆಯು ಸಾವಿತ್ರಿ
ಸೂರ್ಯನಾಚೆಯ ಸೋಮಹಾಸ್ಯ ಕರೆದವಳು
ಸತ್ಯವಂತರ ಮರ್ತ್ಯ ಡಿಂಭಗಳ ಗೊಂಬೆಯಲಿ
ಶಮರಮಿತ ನವ ಬಿಂಬ ಸೃಷ್ಟಿ ಮೆರೆದವಳು
ಮಾರ್ತಾಂಡ ಮಂಡಲದ ಅಂಡವನು ಪುಟಗೊಳಿಸಿ
ಹಂಸಜಾತಿಯ ಜೀವಜಾತಿ ತೆರೆದವಳು.

# ಶ್ರೀಮಾತೃಶ್ರೀಗೆ

ನಿನ್ನ ನೋಟವೆ ಹಾಲು
ತಾಯಿ ನೀನು.
ಕಂಗಳಿಂದಲೆ ಕುಡಿವೆ
ಕೂಸು ನಾನು.

ಕಂಗಳಿಂದಲೆ ನುಡಿವೆ
ತಾಯಿ ನೀನು.
ನನ್ನ ಕಣ್ಣೇ ಕಿವಿಯು
ಕವಿಯು ನಾನು.

# ನಾಲ್ವರು ತಾಯಂದಿರು

ಬಾರೆ ಬಾ ಮಹೇಶ್ವರೀ
ಬಾ, ಬಾ, ಬಾ ಬಾ.
ಬಾರೆ ಬಾ ಮಹೇಶ್ವರೀ
ಮಹಾಕಾಳಿ ಮಹಾಲಕ್ಷ್ಮಿ
ಬಾ ಮಹಾಸರಸ್ವತೀ
ಇಹುದು ನಿಮಗೆ ಶಾಶ್ವತಿ. ॥ಪಲ್ಲ॥

೧

ಹಗಲು ಇರುಳು ನಿಮ್ಮ ಕೂಟ,
ಅರಿವೆ ನಿಮಗೆ ದಿನದ ಊಟ,
ಬೆಳಕೊಗೆವುದು ಒಂದು ಆಟ.
ಚಿದಾನಂದ ಲಹರಿ ಬಾ
ಸದಾಶಿವನ ಗೌರಿ ಬಾ.
ನಿಮ್ಮ ಮಗುವು, ಹುಸಿಯ ನಗುವು
ಒಗಿಸಿ ಮಿಗಿಸಿ ಬರುತಿರೆ
ನೀವೆ ಕರೆಯದಿರುತಿರೆ
ಛಂದವೇನು ನೀವೆ ಹೇಳಿ ?
ಕೂಸು ನಾನು ಹೇಳಿಕೇಳಿ.
ನೀವೇ ನನಗಹುದು ಹಸಿಯು.
ಬೆಳೆದೀತೇ ಒಣಕೆ ಸಸಿಯು ?
ನಿಲ್ಲಿರವ್ವಾ ನಿಲ್ಲಿರಿ.
ಕೃಪಾದೃಷ್ಟಿ ಚೆಲ್ಲಿರಿ.

೨

ತಾಳುವೆವೇ ನಿಮ್ಮ ರಾಸ ?—
ಕುಣಿಕುಣಿಯುವ ಅಟ್ಟಹಾಸ
ಅಹಾ ಏನು ಮಹಾಭಾಸ !
ಬಾ ಎನ್ನುವ ಬಾಯಿಯೇ
ನಮಗೆ ಇಲ್ಲ ತಾಯಿಯೇ.
ನಿಮ್ಮ ಭಯಾ ನಮಗಭಯಾ
ಮಹಾಕಾಳಿ ಬಂದಿರೇ
ವಿಶ್ವಪ್ರಾಣಮಂದಿರೇ?
ಕೋಟಿ ಸಲವು ಹುಟ್ಟಿ ಸತ್ತು
ಧಿಮಿತಿಕಿದಿಟ ಎಂದತ್ತು
ಆದರೇನು ನೀವೇ ಬಲ
ನೀವೇ ಹೊಲ ನೀವೇ ಚಲ
ಕಲಿಸಿರವ್ವ ಕಲಿಸಿರಿ
ಹಸುಹರಣವ ಬಲಿಸಿರಿ.

೩

ವಿಷಮದಲ್ಲೆ ಇಹುದು ಸಮ
ವಿಶ್ರಾಂತಿಯೆ ನಿಮ್ಮ ಶ್ರಮ
ಸಂಭ್ರಮದೊಳು ತೊರೆದು ಭ್ರಮ
ಬಾರೆ ಬಾರೆ ಬಾ ರಮಾ
ಅಂತರಂಗಪ್ರಿಯತಮಾ.
ನಿಮ್ಮ ಕಂದ ನಿಮ್ಮ ಅಂದ
ಆಟಪಾಟವಾಡಲಿ
ನವೀನ ಛಂದ ನೋಡಲಿ

ಬನ್ನಿರವ್ವ ಬಯಸಿ ಕರೆವೆ
ನಾನು ನಿಮ್ಮನೆಂತು ಮರೆವೆ ?
ತನುಮನವೂ ನಿಮ್ಮ ಮನೆ
ನಾನು ಕೂಡ ನಿಮ್ಮವನೇ
  ಅಲ್ಲವೇನೆ ? ಬನ್ನಿರೇ
  ಜಯ ಜಯ ಜಯವೆನ್ನಿರೇ.

೪

ನೀನೆ ಪರಾ ನೀನಪರಾ
ನೀ ಭೈರವಿ ನೀ ತಾರಾ
ನೀನು ತ್ರಿಪುರಸುಂದರಾ
  ಬಾರೇ ಬಾ ಭಾರತೀ
  ಎತ್ತು ಆತ್ಮದಾರತೀ.
ನಿಮ್ಮ ಕರ್ಮ ನಮ್ಮ ಧರ್ಮ
  ಕೈವೈಯೊಳು ಬೆಳೆಯಲಿ
  ಕರಣಗಳಲಿ ಉಳಿಯಲಿ.
ನಾಲಗೆಯಲಿ, ನಾಳದಲ್ಲಿ
ಜೀವಭಾವದಾಳದಲ್ಲಿ
ನೀವೇ ಜಗವಾಳುವಲ್ಲಿ
ನಿಮ್ಮುಸಿರೇ ಬಾಳುವಲ್ಲಿ
  ಅಂಬಿಕಾತನಯನಾ
  ನಿಲಿಸಿರವ್ವ ದಿನ ದಿನಾ.

# ಏಳು ಬಯಕೆಯ ಬಳ್ಳಿಯೆ

ಏಳು ಬಯಕೆಯ ಬಳ್ಳಿಯೇ
ಅರಳೇಳು ಹೃದಯದ ಆಳಕೆ.
ಜೀವರಸ ಚಿಮ್ಮೇಳು ಹೂ ಹೊ–
ಮ್ಮೇಳು ದೈವದ ಮಾಳಕೆ.
ಸೂರ್ಯಚಂದ್ರಗೆ ಸ್ರವಿಸಲಿ,
ಕೃಪೆಯೊವ ಕರುಣೆಯು ದ್ರವಿಸಲಿ.
ನಾವಲ್ಲ ಮಣ್ಣಿನ ಹುಡಿಗಳು
ಬರಿಗಂಪ ಬೀರುವ ಕುಡಿಗಳು.
ನಾವು ಇರುವೆವು ದಿವ್ಯಭಾಗ್ಯದ ಚುಕ್ಕೆಗಟ್ಟಿದ ಗುಡಿಗಳು.

ಕರೆಯು ಬಂದಿದೆ ದೂರದಿಂದಲೆ ಬರಲಿ ಮುಂದಕೆ ಸಾಗಲಿ
ಏಳಿ ಹೊತ್ತಿನ ಪೀಳಿಗೆ
ಬಂತು ಬೆಳಕಿನ ಏಳಿಗೆ
ನೇತ್ರಗಳ ಜೀವಂತಜ್ಯೋತಿಯ ತಾಯಿ ಕರೆವಳು ಬಾಳಿಗೆ.
ಏಳು–ಬಯಕೆಯ ಬಳ್ಳಿಯೇ

## ಹೃಜ್ಜಾತೇ-ಚಿನ್ಮಾತೇ

ಹೃಜ್ಜಾತೇ ! ಚಿನ್ಮಾತೇ !
ಹೃನ್ಮಾತೇ ಚಿಜ್ಜಾತೇ ಭಾರತ ನವಶಕ್ತಿ !
ನಮ್ಮಾತ್ಮವೆ ಪರಮಾತ್ಮವೆ ಕರುಣಿಸು ತವ ಭಕ್ತಿ ॥ ಪಲ್ಲ ॥

ಜಯವೇ ನಯವೇ
ಹೊಸ ಅಭಯವೆ, ಶುಭೋದಯವೆ, ಮಂಗಲಮಯವೇ !
ಎಂದೆಂದೂ ಈ ಮಕ್ಕಳ ಕೈ ಮೈ ಹಿಡಿದಾಕೇ !
ಯಾರಾರಿಗೊ ಬಾಗಿದರೂ ನಮ್ಮೆದೆ ಬಿಡದಾಕೇ !
ಆಪತ್ತನು ತಡೆದಾಕೇ, ಜೊತೆ ಜೊತೆ ನಡೆದಾಕೇ !
ಹೊಸ ನಗೆಯಿದೆ ತವ ಮುಖದಲಿ
ಬಿಡುಗಡೆಯಿದೆ ಸಮ್ಮುಖದಲಿ
ನಮಿಸುವೆವಿದೊ ಒಮ್ಮುಖದಲಿ.

ತೆರೆದಿರುವೀ ಬಿಡುಗಡೆಯಾಗಲಿ ಜಗದುದಯ
ಹಿಗ್ಗುತಿರಲಿ ಸನ್ಮಹಿಮೆಯ ನವದಿಗ್ವಲಯ
ನಾಡ-ನಾಡಿಗಿದು ನೀಡಲಿ ಬಾಳ್ಮಾಣಿಕೆಯ.
ಅನುಗಾಲವು ಹಿರಿಗುರಿಯಲಿ ಭರವಸೆ ಬರುವಂತೆ
ನಿನ್ನಾತ್ಮದ ಒಳುಮೂರ್ತಿಯ ಮೂಡಿಸುತಿರುವಂತೆ
ಜನಜನಕೂ ಗೆಳೆ-ನಾಡಿದು ಆತ್ಮವ ತೆರೆವಂತೆ
ನಡೆ ನಡಿಸೌ ನುಡಿ ನುಡಿಸೌ ಮಾತೆಯ ಮಂತ್ರೋಕ್ತಿ
ಅರವಿಂದರ ಹೃಜ್ಜಾತೇ ಋತತಂತ್ರದ ಯುಕ್ತೀ !

# ಶ್ರೀತಾಯಿಗೆ

ಹಾರುಹಕ್ಕಿಯ ತೆರದಿ ಬರುವೆ ಹಾರಯಿಸುತ್ತ
ನಿನ್ನ ನೀಲ ವಿಶಾಲ ಗಗನದಲ್ಲಿ.
ತಾಯಿ ಎನಿತೇ ನೀನು ದೂರವಿದ್ದರು ಏನು ?
ನನಗೆ ಎನಿಸುವೆ ನೀ ಸಮೀಪದಲ್ಲಿ.

ಚಿಕ್ಕ ಬಾನಿನೊಳೊಂದು ಚುಕ್ಕೆ ನಾನೇ ತಾನು
ನಿನ್ನ ಹಿಗ್ಗಿಗೆ ನನ್ನ ಹಕ್ಕಿಗೊಳಿಸಿ,
ಕೂಗೆಂದೆ ಹಾಡೊಂದು ಕಂಠಹೃದಯದೊಳಿಕ್ಕಿ
ಆಟಕ್ಕೆ ಗರಿ–ಪ್ಪೈಯ ತೊಡಿಗೆ ಕೊಡಿಸಿ.

ರೆಕ್ಕೆ ಬಳಲಲು ನಾನು ಮೆಲ್ಲಗಿಳಿಯುತ ಕೆಳಗೆ
ಕೂರುವೆನು ಹೆಮ್ಮರದ ತಲೆಯನೊರಸಿ.
ಸುತ್ತು ಬಳಿಯುಂತಿರುವ ನಿನ್ನ ನೀಲದ ನಿಲಯ
ಇಹುದು ಗೂಡಿನೊಲೆನ್ನನೆದೆಯೊಳಿರಿಸಿ.

# ಬೆಳಕಿನ ಲಿಂಗ

ಮಾತಾಡೊ ಮಾತಾಡೊ ಲಿಂಗವೇ । ನೀ
ಮಾತಾಡಲೊಲ್ಲೇಕೊ ಲಿಂಗವೇ ?
ಮಾತಿನ ಬಸಿರಲ್ಲಿ ನೆಲೆಗೊಂಡ ಮೌನದಿ
ಹೊತಂಥ ಬೆಳಕಿನ ಲಿಂಗವೇ.

ಗುಡುಗಾಡೊ ಗುಡುಗಾಡೊ ಲಿಂಗವೇ । ನೀ
ಗುಡುಗಾಡಲೊಲ್ಲೇಕೊ ಲಿಂಗವೇ ?
ನಡುಹಗಲ ನೆತ್ತಿಯ ಮೋಡದ ಒಡಲಲ್ಲಿ
ಮಿಡುಕುವ ಮಿಂಚಿನ ಲಿಂಗವೇ.

ಉರಿದೇಳೊ ಉರಿದೇಳೊ ಲಿಂಗವೇ । ನೀ
ಹರಿದೇಳಲೊಲ್ಲೇಕೊ ಲಿಂಗವೇ ?
ಉರದ ಕತ್ತಲೆಯನ್ನು ಹುರಿದು ಕಿಡಿಕಿಡಿಯಾಗಿ
ಮೆರೆವಂಥ ಬೆಂಕಿಯ ಲಿಂಗವೇ.

ಕೂಡು ಬಾ ಕೂಡು ಬಾ ಲಿಂಗವೇ । ನೀ
ಕೂಡಲು ಒಲ್ಲೇಕೊ ಲಿಂಗವೇ ?
ಕೂಡಲದಲ್ಲೊಗೆವ ಮೂಡಲದೊಲವಿನಲಿ
ಮೂಡಿ ಬಾ ಮುತ್ತಿನ ಲಿಂಗವೇ.

# ಬೇಕು

ವೈರಿಗೆ ಅನ್ನವು ಸಿಕ್ಕದ ಹಾಗೆ
ಸುಡಬೇಕು, ನೆಲ ಸುಡಬೇಕು ||

ನವಬೀಜದ ಹೊಸ ಬಿತ್ತಿಗೆಗಾಗಿ
ಬಿಡಬೇಕು, ಹೊಲ ಬಿಡಬೇಕು ||

ಬಂದ ಬೆಳೆಯು ತುಸು ಕಳೆಯದ ಹಾಗೆ
ಇಡಬೇಕು, ಕಾದಿಡಬೇಕು ||

ಒಬ್ಬಗೆ ಬಂದುದು ಎಲ್ಲರಿಗುಂಟು
ಕೊಡಬೇಕು, ಹಿಡಿ ಕೊಡಬೇಕು ||

ಕೊಟ್ಟ ದೇವನಿಗೆ ಕೊಡುವೆನು ಎಂದು
ತೊಡಬೇಕು, ಪಣ ತೊಡಬೇಕು ||

ಜೀವ ಜೀವಗಳ ಗೆಳೆಯನು ಆಗಿ
ಪಡಬೇಕು, ಸುಖಬಡಬೇಕು ||

ದೇವದೇವನಿಗೆ ವಾಹನವಾಗಿ
ನೆಡಬೇಕು, ಗುಡಿ ನೆಡಬೇಕು ||

ಅರವಿಂದರ ಮಕರಂದವ ಕುಡಿದಾ
ನುಡಿ ಬೇಕು, ಒಡನುಡಿ ಬೇಕು ||

## ಸಹನಾ

ಸಹನಾ, ಸಹನಾ, ಸಹನಾ, ಸಹನಾ !
ಎಲ್ಲಿರುವೆಯೆ ಸಹನಾ ?
ಜನನದ ಮರಣದ ನಡುವಿನ ಹೊಳೆಯಲಿ
ಈಸಾಡುವ ಮೀನಾ !

ಅನಂತರೂಪದ ಚಿರಂತನಾ !
(ಸನತ್ಕುಮಾರೀ ಚಿರಯೌವನಾ ! )
ತೆರೆ ತೆರೆ ನಿನ್ನಾ ಅನಿಮಿಷನಯನಾ.
ನೆಲಕೆ ಮೊಲೆಯ ಕುಡಿಸಿದ ತರಳೇ !
ಸಾವಿರ ದೀಧಿತಿ ಸೂಸುವ ಹರಳೇ !
ಸಹನಾ, ಸಹನಾ, ಸಹನಾ !

ನೀನಿಲ್ಲದ ಸುರವೀರನು ಭೀರು
ನೀ ಪ್ರಾಣದ ಬೇರು.
ನಿನ್ನೆದೆಹಾಲನು ಊಡಿಸೆ ಸಹನಾ
(ಹಾಲಿರದಿರೆ ನಾನೆಂಬುವದೆ ಅಸಹನಾ)
ನೀನೇ ಸಹ–ಜೀವದ ಭವನಾ !

# ಪ್ರಕೃತಿ-ಪುರುಷ

ಪ್ರಕೃತಿಗೆ ಕೈಕಾಲುಂಟು
ಪುರುಷನಿಗೋ ಅವೆ ಇಲ್ಲ.
ಪ್ರಕೃತಿಗೆ ಕಣ್‌ಕಿವಿ ಇಲ್ಲ
ಪುರುಷನಿಗೋ ಇವೆ ಎಲ್ಲ.

ಈ ಇಬ್ಬರ ಸಂಸಾರ
ನಡೆದಿಹುದು ನಿರಂತರ.
ಬೆಳೆಯುತಿಹುದು ಸಂತತಿ
ಏಕೆ ಅದಕೆ ಇತಿಮಿತಿ !

ಹೊಟ್ಟೆಮಕ್ಕಳನ್ನೆ ತಿಂದು
ಬಾಳುತಿಹರು ಇಬ್ಬರೂ.
ಅಮರರವರು ಹೀಗೆ ಇಹರು,
ಸಾಯಲಾರರೊಬ್ಬರೂ.

ಇಂಥ ಈ ಪ್ರಜಾಪತಿ
ಆ ಪ್ರಾಣೇಶ್ವರಿಗೆ ಗತಿ;
ಸಂತಾನಕೆ ಸಾವೆ ಶರಣ
ನಿತ್ಯ ಜನ್ಮ, ನಿತ್ಯ ಮರಣ.

ಅದರ ಮಧ್ಯೆ ಕನಸಿನಂತೆ
ಜೀವನದೀ ಚಿತ್ರಪಟ
ತೆರೆಮರೆಗಳ ಆಟದಲ್ಲಿ
ಉರುಳುತಿಹುದು ಝಟಪಟ.

ತಿರುಗ ಮುರುಗ ಮತ್ತೆ ಅದೇ
ಇದ್ದಕಿದ್ದ ಹಾಗೆ ಇದೆ.
ಸಾಕೊ ಕಥೆ, ಸಾಕು ಹಾಡು.
ಏಕೆ ವ್ಯಥೆ ಪಡುವೆ ಪಾಡು?
‘ ಇದುವು ವ್ಯರ್ಥವಲ್ಲವೆ ? ’
—‘ ಅರ್ಥ ಇದ್ದರಲ್ಲವೇ ? ’

# ರೌದ್ರಿ

( ಸ್ವಾಮಿ ವಿವೇಕಾನಂದರ ಕವನ ಒಂದರ ಅನುವಾದ )

ಚಿಕ್ಕೆ ಬಾನೊಳಿಂಗಿವೆ
ಮೋಡ ಮುಗಿಲ ನುಂಗಿವೆ.
ಚಿರಗುಟ್ಟುವ ದುರಗುಟ್ಟುವ
ಕತ್ತಲೋ ಕತ್ತಲೇ
ಸುಟ್ಟುರೆಯೇ ಬಿರುಗಾಳಿಯೆ
ಲೋಕದತ್ತಲಿತ್ತಲೆ.
ಮುರಿದು ಸೆರೆ, ಬಂತೊ ನೆರೆ
ಮರುಳ ಪಡೆಯೆ ಬೆತ್ತಲೆ.

ಮರಕಿತ್ತಿವೆ ಬುಡ–ತಳ
ಹಾದಿ ಉಡುಗೆ ಝುಳಝುಳ
ಕಡಲು ಕುಣಿಯೆ ಗೊಂದಣ
ತೆರೆ–ಮುರಿ–ನೊರೆ ಧಂಧಣ
ಮಬ್ಬೆ ಮಳೆಯು ನಾಡಿಗೆ
ಮುಗಿಲಿನಂಚು ಕಾಡಿಗೆ.
ಸಾವು ಹೊಂಚು, ಅಯ್ಯೊ ಮಿಂಚು
ಕಣ್ತೆರೆದೆಡೆ ಸುತ್ತಿಗೊಂಡ
ಲಕ್ಷಗೋಟಿ ರೂಪಗೊಂಡ
ಸಾವಿನಿಂದ ಮುತ್ತುತ
ಕಷ್ಟನಷ್ಟ ಬಿತ್ತುತ
ಹಿಗ್ಗಿಗೊಂಡು ಹುಚ್ಚೆದ್ದು
ಕುಣಿವ ತಾಯಿ ಬಾ!

‘ ರೌದ್ರಿ ’ ನಿನ್ನ ಹೆಸರುಃ
ಮೃತ್ಯು ನಿನ್ನ ಉಸಿರುಃ
ನಿನ್ನ ಒಂದು ನಡೆ ಅಡಿ
ಜಗವ ಮಾಡೆ ಪುಡಿಪುಡಿ.

ಪ್ರಳಯಂಕರಿ ಓ ಕಾಳೀ
ಬಾ ತಾಯಿಯೆ ಬಾ !

# ಅದ ಬರಿದೆ ನುಡಿಸಬಹುದೆ ?

ಕಣ್ ಹಿಡಿದುದನ್ನು ಮೈ ಹಿಡಿಸಬಹುದೆ ?
ಅದ ಬರಿದೆ ನುಡಿಸಬಹುದೇ ?
ಕುಣಿದಿಲ್ಲ ಕೊರಳು, ಮಣಿದಿಲ್ಲ ಬೆರಳು,
ಮರವೀಣೆ ಮಿಡಿಸಲಹುದೇ ?

ಹುಲುಗೊಡ್ಡು ಮೋಡ ಹುಸಿಗುಡುಗಿದಾಗ
ಕೆಲಜೀವ ಭೇಕಿಸುವವು.
ಮೈಸವಿರ ನವಿಲು ಮೈಯುಣ್ಣದೇನೆ
ಬರಿದೆಂತು ಕೇಕಿಸುವವು ?

ವೇದಕ್ಕು ಹಿರಿದು ವಚನಕ್ಕು ಕಿರಿದು
ನುಡಿಕಟ್ಟಿ ಒಟ್ಟಬಹುದು.
ಆ ಇರವನಿರದೆ ಅರಿವಾಗದೇಯೆ
ಶ್ರುತಿಯೆಂತು ಹುಟ್ಟಲಹುದು ?

ಶ್ರೀಗೀತೆಗಿಂತ ಮಿಗಿಲಾದ ರಾಗ
ಸ್ವರವೆತ್ತಿ ಹೇಳಬಹುದು.
ಭಗವಂತಗಿಂತ ಎತ್ತರಕೆ ಎಂತು
ಕಿರಿಜೀವ ಬಾಳಬಹುದು ?

ಬಾಳಸೆಲೆಯ ನುಡಿಬೇಕು, ಬಣ್ಣ–
–ದೊಳಬಾಳ ಆಳಬೇಕು,
ಅರುಹಾಗಬೇಕು, ಹರುಹಾಗಬೇಕು,
ಬಿಳಿತುದಿಗೆ ಏಳಬೇಕು.

# ಪ್ರಾರ್ಥನೆ

ಭೂಮಿಯು ಅನಂತಸೌಂದರ್ಯಶಾಲಿನಿ,
ಎಲ್ಲವನ್ನೂ ನೋಡುವೆನೆಂದರೆ ನನ್ನಿವೆ ?
ಕಾಲವು ಕ್ಷಣಕ್ಷಣಕ್ಕೂ ಸಾಯುತ್ತಿದೆ;
ಅದನ್ನು ನಾನು ತಡೆದು ನಿಲ್ಲಿಸಬಲ್ಲೆನೇ ?

ಆಗಬೇಕಾದ ಕಾರ್ಯ ಅನಂತವಾಗಿದೆ;
ಅದನ್ನು ಮಾಡಲು ಬಂದ ಜೀವಗಳು ಅನಂತವಾಗಿವೆ;
ನಾನೊಬ್ಬನೇ ಅಲ್ಲ, ನನ್ನ ಜೀವಮಾನದೊಳಗಾಗಿಯೇ
ಎಲ್ಲವೂ ಆಗಬೇಕಾಗಿಲ್ಲ.

ಜೀವಜಗತ್ತುಗಳನ್ನು ತುಂಬಿತುಳುಕಿ ಸೂಸುವ
ಒಂದು ಶಕ್ತಿ,
ನಾನೆಂದು ಕಾಣುವ ಈ ಪಾತ್ರವನ್ನು
ತನ್ನ ಮಹಾನಾಟಕಕ್ಕಾಗಿ ಸಜ್ಜಗೊಳಿಸಿದೆ.

ಈ ಪಾತ್ರದಿಂದ ಆಗತಕ್ಕಷ್ಟೇ ಕೆಲಸವಾದೀತು;
ಎಲ್ಲ ಕೆಲಸಕ್ಕೂ ನನ್ನನ್ನೇ ಎಳೆದಾಡುವದು ಸೂಕ್ತವಲ್ಲ.
ನೋಡತಕ್ಕಷ್ಟೇ ನೋಡೇನು, ಮಾಡತಕ್ಕಷ್ಟೇ ಮಾಡೇನು.
ಅಹಂಕಾರದ ಹೆಚ್ಚುಗಾರಿಕೆ ರಸಕ್ಕೆ ಅನುಚಿತ;
ವಸ್ತುವಿಗೆ ಅಧಿಕ ಪ್ರಸಂಗ.
ಪ್ರೇಕ್ಷಕರ ಚಪ್ಪಾಳೆಗಾಗಿ ಪಾತ್ರದಿಂದ ಅಪಾತ್ರ–ಕಾರ್ಯ
ಮಾಡಿಸುವದು ವಿನೋದವಲ್ಲ.
ಅಪಹಾಸ ಉಪಹಾಸವು ಪಾತ್ರವನ್ನೂ ಪ್ರೇಕ್ಷಕರನ್ನೂ
ಇಬ್ಬರನ್ನೂ ಹಾದಿಗೆಡಿಸುವದು.

ಕಾವ್ಯದಂತೆ ಕವಿಯ ಆತ್ಮವೂ ರಸ,
ಪ್ರೇಕ್ಷಕರ ಆತ್ಮವೂ ರಸವೇ.
ಆ ರಸದ ಮಾರ್ಗದಿಂದ ನಾವು
ಸೂತ್ರಧಾರ ಶಕ್ತಿಗೆ ಅಧೀನರಾಗುವಾ.

ಈ ಪರಾ–ಅಧೀನತೆಯಲ್ಲಿ ಸ್ವಾತಂತ್ರ್ಯವಿದೆ.
ನನ್ನ ಚಿತ್ತಪುರುಷನು ಪರಾಶಕ್ತಿಗೆ ಭಕ್ತನಾಗಿರುವ;
ಪುರುಷೋತ್ತಮನ ಪಾದರೇಣುವಾದರೂ ಆಗಿರುವ.

ಅರಿವಿನ ಆನಂದ ಪಡೆಯಲು
ಆ ಆನಂದದಲ್ಲಿ ನಡೆಯಲು–ಈ ಜೀವ
ನಿರಂತರವಾಗಿ ಉನ್ಮುಖವಾಗಿದೆ; ಸರ್ವತೋಮುಖವಾಗಿದೆ.
ನಿನ್ನ ಬೆಳಕಿನಲ್ಲಿ ನನ್ನನು ಬದುಕಿಸು ತಾಯಿ,
ಓ ಮಹಾಮಾತೆ, ಅದಿತಿ-ಶಕ್ತಿ !

ಈ ಮಣ್ಣಿನ ಒಡಲಲ್ಲಿ
ಈ ಗಾಳಿಯ ಎಳೆಯಲ್ಲಿ
ಈ ಮಿಂಚಿನ ಸುಳಿಯಲ್ಲಿ
ನಿನ್ನ ಮಗುವೊಂದು ತನ್ನ ಜೀವವನ್ನೆ ಕಣ್ಣಾಗಿ ಮಾಡಿ
ನಿನ್ನನ್ನೇ ನೋಡುತ್ತಿದೆ, ನಿನ್ನನ್ನೇ ಬೇಡುತ್ತಿದೆ.
ಈ ವಿಕಲ ಪ್ರಾಣಿಯನ್ನು
ಸಕಲ ಜೀವನಕ್ಕಾಗಿ ಸಿದ್ಧ ಮಾಡು ಎಂದು.

# ಇದೆ ಇಲ್ಲಿಯೆ

ಇದೆ ಇಲ್ಲಿಯೆ ಎದೆಯಲ್ಲಿಯೆ
ಎಂದರು ಎಲ್ಲೊ ಇದೆ.
ಹೃದಯವು ನಿರ್ದಯವದು
ಆದೀತೇನು ? ಸುಧೆ
ಹುಳಿ ಹಿಡಿದರೆ ಉಳಿದಾವೇ
ಉಳಿದೊಡವೆಗಳೆಲ್ಲಾ ?
ಇಲ್ಲಾ ಇಲ್ಲಾ ಎನಲೇ
ಈ ಕರೆಯೇನಿಲ್ಲಾ ?
ಪ್ರಳಯವು ನೀನಿರದಿರೆ; ನೀ–
ನಿದ್ದುದು ಪ್ರಣಯವಿಧೀ
ಸುಹೃದನೆ ಬಾ ಉದಯಿಸು ನೀ;
ನೀನೇ ಹೃದಯನಿಧೀ.
ಸವಿನುಡಿಗಳ ಒಡನಾಟವೆ
ನಿನ್ನೊಡನಾಟದೊಲು
ನಿನ್ನೊಡನಾಡುತಲಿದೆ ನ–
ನ್ನೆದೆಯೇ ಪಾಟದೊಲು.

# ಎಲ್ಲ ಆಟ-ಮಾಟ-ನಗೆ !

ನೆಲವನ್ನು ತಿರುಗುವೊಲು
ತಿರುಗುವದ ನಿಂತವೊಲು
        ಮಾಡಿರುವ ನಿನಗೆ
ಯಾವುದಿದೆ ಬಿಗಿ ? ಎಲ್ಲ
        ಆಟ, ಮಾಟ, ನಗೆ.

ಬಾನಿಗಾವುದು ಕಂಬ ?
ಇಳೆಗಾವುಗಾಲಂಬ ?
        ಗಾಳಿ ಸ್ವಚ್ಛಂದ.
ನೀರೇರಿ ಮಳೆಯಾಗೆ
ಬೆಳಕಿಳಿದು ಬೆಳೆಯಾಗೆ–
        ಚಂದ ಬಿಸವಂದ.

ಯಾರು ಯಾರೊಳಗಿಹರೊ ?
ಯಾರೊಳಗ ಬೆಳಗಿಹರೊ ?
        ಜೀವ ಜೇನೋ !
ದೇವ, ಜಗದೀ ಹೂವ
ತೆರೆದು ಮುಚ್ಚುವನಾವ ?
        ನಾನೊ ನೀನೋ ?

## ಯಾರು ?

ಯಾರು ತಳಕೆ ನೆಲದ ಹಾಗೆ
ಸುತ್ತುತಿಹರು ಸುಮ್ಮನೆ?
ಕಾಲಕೆಳಗೆ ತುಳಿದು ಅದನು
ನಾನು ಇಹೆನು ಬಿಮ್ಮನೇ.

ಬೆಂಕಿ ನುಂಗಿ ಬೆಳಕ ಸೂಸಿ
ಕತ್ತಲಲ್ಲಿ ಯಾರಿದು ?
ಅಳಿದು ಬೆಳೆದು ಬೆಳಗುತಿಹದು
ಇದರ ನೆಲೆಯೆ ತೋರದು.

ಕೋಟಿ ಚುಕ್ಕೆ ಬರುವವಣ್ಣ
ಇರುಳ ಮೈಯ ನೆಕ್ಕುತ
ಹಗಲಚುಕ್ಕೆಗೀಡೆ ಅದುವು
ಬಹದು ಕಣ್ಣ ಕುಕ್ಕುತ.

ನಸುಕು ಬೈಗು ಬೆಳಕು ಮಬ್ಬು
ಕಲೆತು ಬೆರೆತು ಆಡುತ
ಎತ್ತೊ ಹೊತ್ತಿನತ್ತ ನುಗ್ಗು-
ತಿಹವು ಯುಗವ ದೂಡುತ.

ಚಿರಂತನದ ಪಥಿಕ ನಾನು
ಹೊರಟೆ ತಿರುಳ ಹುಡುಕುತ,
ನೆರಳಿನಂತೆ ಹುರುಳಿನಲ್ಲಿ
ಕರಗಿದರೂ ದುಡುಕುತ.

# ನೆಲವೆಲ್ಲಾ ನೀರಾಗಿರೆ

ನೆಲವೆಲ್ಲಾ ನೀರಾಗಿರೆ
ಸೃಷ್ಟಿಯು ಎತ್ತೋ ಸಾಗಿರೆ
ಒಡೆದವು ಅನಂದದ ರೆಕ್ಕೆ
ಬಾನಗಲದ ಕಡಲಾಳದ
ಒಂದೇ ಮಿೂನಕ್ಕೆ.

ಎಲ್ಲೆಲ್ಲೂ ಅಲ್ಲೋಲದ
ಕಲ್ಲೋಲದ ಮಾಲೆ
ಮಿಂಚಿನ ನೀರೆಯ ಪಾಂಗಿದೆ
ನೀರ್ಮಂಚದ ಮೇಲೆ
ಬಯಲಗಲದ ಬಾನ್ಗನ್ನಡಿ ಕನ್ನಡಿಸಿದ ಹಾಗೆ.

# ಬಂದ ಸ್ವಸ್ಥತೆ ನಿಲಲಿ

ಬಂದ ಸ್ವಸ್ಥತೆ ನಿಲಲಿ ಮಲೆಯೊಲು, ನೆಲವು ನೆಲೆ ಬಿಡದಂತೆ.
ಹಾರು–ಸ್ಥಿರತೆಯು ಗೂಡ ಕಟ್ಟಲಿ ಇಲ್ಲೆ ತಳಹಿಡಿದಂತ್ರೆ.
ತಮ್ಮ ಒಲುವೆಂಯೆ ತೆರೆದ ಸ್ತೈರಣೆ ಹರಕೆಯೊಲು ನೆರಳಾಗಿ
ತಮ್ಮ ಬೆಳಕನು ಉಂಟೆ ಕಟ್ಟಲಿ ಜೀವವೇ ಹರಳಾಗಿ.
ನಸುಕು ತೆರೆದರೆ ನೇಸರಗೆ ತಡವೇನು ? ಆವ ಬಂದಂತೆ.
ತಮ್ಮ ನುಡಿ ಗುಡಿಗಟ್ಟಿದರೆ ಸರಿ ಜಗವೆ ನೀನಂದಂತೆ.

# ಅವತರಿಸು ಬಾ

ಅವತರಿಸು ಬಾ ನಾರಾಯಣಾ ||
ಎತ್ತೆನ್ನ ಮೇಲಕೆ ಚಿದ್ಘನಾ ||
ಈ ಜೀವವಾಗಲಿ ಪಾವನಾ ||

ಈ ಪ್ರಾಣ ತನು ಮನ ದೇವನಾ ||
ಹಗಲಿರುಳು ಮಾಡಲಿ ಸೇವನಾ ||
ಆಗಹುದು ಭಗವಜ್ಜೀವನಾ ||

ಅತ್ಯಂತ ನಿರ್ಮಲ ಪ್ರೇಮವು ||
ಅದು ಸಹಜ ಜೀವನ ಧಾಮವು ||
ಅಲ್ಲಿರುವ ಅನ್ನವೆ ಸೋಮವು ||

# ಕಂಡುದನೆ ಒಳಗೊಂಡು

ಕಂಡುದನೆ ಒಳಗೊಂಡು ಉಂಡು ಗರ್ಭೀಕರಿಸಿ
ಹೊರಬರುವ ಮೈಗೊಂಡ ಪಿಂಡ ಬೆಳೆವಂತೆ
ಆಕಾಶಗಂಗಾತಟಾಕ ತೇಜಃಪುಂಜ–
ದಲ್ಲಿ ಒಳಗಿನ ಬೆದೆಗೆ ಚುಕ್ಕೆ ಹೊಳೆವಂತೆ.

ಕಾವಾಗಿ ಬೆಳಕಾಗಿ ಮಿಂಚಾಗಿ ಸೆಳವೆಯಲಿ
ತಾನು ವಿಶ್ವಂಕರ್ಷ ಪವನವಾಗಿ
ಬಾನೆ ಮೈ, ನವಿರೆ ನಕ್ಷತ್ರಪಂಕ್ತಿರೆ, ಎಂದು
ಉಸಿರು ಮೈದುಂಬುವದೊ ಕವನವಾಗಿ ?

ಗುರುವೆ, ನಿನ್ನಲ್ಲಿರುವ ಅರುವೆ ತಿಳಿಹಾಲಾಗೆ
ತರುವೆ ' ಕರುವೇ ಬಾರ ತೊರೆವೆ ' ಎಂದು,
ಕರೆವಂದು ಸವಿಯ ತವನಿಧಿಯಾಗಿ ಕರಿಗೊಂಡು
ಈ ಇರುವೆ ತುಂಬುವದು ದಿನ ತುಂಬುವಂದು.

# ಇಂದ್ರಜಾಲ

ಎವೆಯನಿಕ್ಕಿ ಕಣ್ಣಿಂದ ಕಂಡೆ ನಾ ರವಿಯ ತೇಜದಾಟ,
ಬಣ್ಣಬಣ್ಣದಾಕೃತಿಗಳಲ್ಲಿ ಕುಣಿಕುಣಿವ ಮೋಡಿ ಮಾಟ.
ಏಳು ಬಣ್ಣ ಉರುಳುರುಳಿ ಉರುಳಿಯಾದಂತೆ ತಿರುಗುತಿಹವು
ಇಂದ್ರಚಾಪವನೆ ತಂತಿಮಾಡಿ ಹೆಣೆದಂತೆ ಮರಳಿ ಬಹವು.

ಎಂಥ ಮಂಜು, ಇದು ಏನು ಹೊಗೆಯು, ಅಹ ಯಾವ ಮೋಡದೊಡ್ಡು
ಬಗೆಯ ಹಗೆಯವನೆ ಹೊಕ್ಕ ಹಾಗೆ ಹರಹುವದು ಮಬ್ಬುಗೊಡ್ಡು.
ಅದರ ಹೊಂಚಿನಲಿ ಮಿಂಚು ಒಂದು ಚಂಚಲಿಸಿ ಅಡಗಲುಂಟು
ಬೆಳಕು ಕತ್ತಲೆಗೆ ಯಾವ ಗಂಟೊ ? ಬಂಜೆಯಲಿ ಬೆಸಲ ನಂಟು.

ರಂಗವಲ್ಲಿಯೊಳಗಿಟ್ಟ ಅಕ್ಕಿಗಳು ಬಿಚ್ಚಿ ಕುಣಿವ ಹಾಗೆ
ಅತ್ತ ಸರಿಯುವವು ಇತ್ತ ಹರಿಯುವವು ಎತ್ತೊ ಕೆಳಗೆ ಮೇಗೆ.
ತಪ್ತ ಕಾಂಚನದ ತಗಡಿನಲ್ಲಿ ಬರೆದಂಥ ಜಂತ್ರದಂತೆ
ಯಾವ ಲಿಪಿಯೊ ಇದು, ಏಕೆ ಬಂತೊ ಇಲ್ಲಾವ ತಂತ್ರದಂತೆ ?

ಬಿಳಿಯ ಮೋಡಗಳು ಒಟ್ಟುತಿಹವು ಹಿಮಶೈಲ ಕಟ್ಟಿದಂತೆ
ಕರಿಯ ಮೋಡ ಮಿರಿ ಮಿಂಚುತಿಹವು ನವನೀಲ ಹುಟ್ಟಿದಂತೆ.
ಇಲ್ಲಿ ಬಣ್ಣಗಳ ನುಂಗುವಂಥ ಬಿಳಿ ಬೆಳಕು ಬಂತು ಒಂದು
ನೆನಸಿದಂಥ ರೂಪವನು ತೋರುವದು ಕ್ಷಣವೆ ಕಟ್ಟಿ ತಂದು.

ಅದೊ ಕರ್ಣದಲ್ಲಿ, ಒಳುವರ್ಣದಲ್ಲಿ ಸ್ವರಸ್ವರ್ಣವಲ್ಲಿ ಅರಳಿ
ರಸರಾಗದಲ್ಲಿ ಅನುರಾಗವಲ್ಲಿ ಹೊಸ ಒಲವು ಲಹರಿ ಮರಳಿ.
ಕರೆಯುತಿಹುದು ಬಗೆಬಗೆಯ ನಗೆಯು ಒಗುಮಿಗುವ ನಾಕದಲ್ಲಿ.
ಗಿಣಿಗಿಣಿಲು ಗಂಟೆ ಮಧುರಸವನೀಂಟೆ ಗಂಧರ್ವಲೋಕದಲ್ಲಿ—

ಮೂರ್ತಿಗೊಂಡ ರೂಪಕವು ಕಾಣದಿದೆ, ಊನ ನ್ಯೂನವೇನೋ?
ತರಳ ಉಪಮೆ ಲವಲವಿಕೆಯಲ್ಲಿ ಉತ್ಪ್ರೇಕ್ಷೆಯಾಯಿತೇನೊ!
ತೇಜವೊಡೆದು ಪರಪುಷ್ಟವಾದ ಗ್ರಹಮಾಲೆಯಾದ ಹಾಗೆ—
ಉತ್ಪ್ರೇಕ್ಷೆಯಂತೆ ಕ್ಷಣಕೊಂದರಂತೆ ತೋರುವದಿದೇಕೊ ನನಗೆ?

# ಅಣುವಿನೊಡಲೊಳಗೆ

ಅಣುವಿನೊಡಲೊಳಗೆ ಆಯೆಂದು ಬಾಯ್ದೆರೆದಿರುವ
ಮಹತೋ ಮಹೀಯವೇ ! ನಿನ್ನ ಬರವಿನ ಮುಂಚೆ
ಬರುವ ನೆಳಲೋ ಏನೊ, ಇದುವೆ ಕಾಡಿಗೆ ಕರೆವ
ಕಾರ್ಗಾಲ ! ಈ ಬೆಳಕು ಸುಡುವ ಸಿಡಿಲೇ ಮಿಂಚೆ ?
ಯೌವನದ ನಂದನದ ಸುಕುಮಾರ ಸುಮಗಳನು
ಬಾಳ ಬೇಳುವೆಯು ಬೇಡುವದೆ ? ಇದಕೀ ಹವಿಯೊ
ಆಹಾ ! ಭವಿಯೊ ? ಜಂಗಮಕ್ಕೆ ನೀಡವುಗಳನು
ನಿನ್ನ ದೀಪಾರತಿಯೊ ! ರವಿಯೊ ! ಕತ್ತಲೆ ಗವಿಯೊ !

ಇಂದ್ರಚಾಪದಿ ಬರೆದ ರಂಗವಲ್ಲಿಯ ತುಳಿದು
ಬರುವ ಪದಪಲ್ಲವದಿ ಹರಿವ ವಿಸ್ವಕ್ ಸೇವ್ಯ
ಜೀವನಜ್ಯೋತಿಯೇ ! ನಿನ್ನ ಸತ್ತ್ವವೆ ತಳಿದು
ಮೂರ್ತಿಗೊಳ್ಳುತಲಿಲ್ಲಿ ನವಿರುನವಿರಿಗೆ ಕಣ್ಣ
ತೆರೆದು ನೋಡುತ್ತಿರುವ ನವ್ಯವೇ ದಿವ್ಯವೇ !
ಸಾವಿರದ ನಿನ್ನ ಮೊಗದಲ್ಲಿ ಸಾವಿರ ಬಣ್ಣ.

# ಪರವೆ-ತುಂಬಿ

ಕಾಳಿ ಗಾಳಿಯಲಿ ಗಾಡಿಯೇರುತಿರೆ
ಗಾಲಿ ತಿರುಗುತಿಹವು.
ಕಾಲಕಾಲಕೂ ಕಾಲ ತಾಲದಲಿ
ಗೆಜ್ಜೆ ಮಿರುಗುತಿಹವು.

ಪ್ರಾರ್ಥಕೋಟಿ ಬೆಳುಮೀನ ಮಿಂಚುತಿವೆ
ಬಾನಿನೊಡಲಿನಲ್ಲಿ.
ಅಬ್ಜಕೋಟಿ ಬಾಳ್‌ಮೀನ ನೋಡುತಿವೆ
ಬದುಕುಗಡಲಿನಲ್ಲಿ.

ತುಂಬಿ ನೊರೆದು ಪರವೆಯನು ಕರೆಯುತಿದೆ
ತುಂಬು ಬಾಳಿಗಾಗಿ.
ಪರಮ ಜೀವನದ ಜೇನ ಕೂಡಿಸಲು
ಇಂದು ನಾಳೆಗಾಗಿ.

ಠಾವು ಠಾವು ಇವು ಹೂವು ನೋಡು ಈ
ನಾವು ನೀವು ಕೂಡ.
ಹೂ ಹೂವು ಇದರ ರಸರಸವು ಬೆರೆಯೆ
ಮಧುಪಾಕವಹುದು ನೋಡ.

ಹಾದಿ ಕಾಣದಲಿ ಹಾದಿ ತೆರೆಯುತಿದೆ
ಹಕ್ಕಿ ಹಕ್ಕಿಗಾಗಿ.
ಕೂಗಿ ಕರೆಯುತಿವೆ, ಕುಣಿದು ಒರೆಯುತಿವೆ
ಸಾಕ್ಷಿ ಪಕ್ಷಿಗಾಗಿ.

ಇದು ಯಾವ ಗೀತಿ, ನವರೀತಿಯಲ್ಲಿ
ಭಯ ಭೀತಿ ತೊರೆದು ಬಂತು ?
ನಾಂದಿಯಾಗಿ ನವನಾಟ್ಯ ನಡೆಸಿರಲು
ವಿಶ್ವ ನಟನೆ ನಿಂತು.

# ಸುದರ್ಶನದಲ್ಲಿ

ಮೂರು ಸಪ್ತಕದಾಚೆ ಮೊಳೆತ ನನೆದನಿಯಿಂದ
ಜೀವಮಂಡಲವು ಪರಿಪೂರ್ಣವಾದಂತೆ
ದೇವಕೇಂದ್ರದಿ ಕದಿರುತಿಪ್ಪ ಆಶೀರ್ವಾದ
ಫಲಿಪ ಸುಮುಸಮಯ ಅವತೀರ್ಣವಾದಂತೆ
ಮೂಡಲಿನ ಕಡಲಿನಲಿ ಅಲ್ಲೋಲ ಕಲ್ಲೋಲ
ಮಂತ್ರಪುಷ್ಪದ ವೇದಘೋಷವಾದಂತೆ
ವಿಶ್ವಮಾತೆಯ ಪ್ರಾರ್ಥನೆಯ ಕೇಳಿ ಶಾಂತಿ ಸಾ-
ಗರದ ಬಸಿರಲ್ಲಿ ಸಂತೋಷವಾದಂತೆ
ಕೃಷ್ಣವರ್ಣದ ವಾಸುದೇವ ಬೀರಿದ ಬೆಳಕು
ಘನನೀಲ ಗಗನದಲಿ ಸೋಸಿ ಬಂದಂತೆ
ನೀಲಘನವೃಷ್ಟಿಯನ್ನುಂಡಾ ವಸುಂಧರೆಯು
ಹಸಿರಿನಲಿ ಕಾಮನನೆ ಹಡೆದು ತಂದಂತೆ
ಮೂಲವರ್ಣವದೊಂದು ನೀಲಿ ಬಣ್ಣದ ಆಚೆ
ಚಾಚುತಿದೆ ಹೊಸ ನಸುಕು ಮೂಡಲಿರುವಂತೆ.
ಆ ಸುದರ್ಶನದಲ್ಲಿ ನವರಾಗರೇಖೆಯಿರೆ
ಕಣ್ಮುಚ್ಚಿ ಲೋಕವಿದೆ ಮೂಢರಿರುವಂತೆ.

# ಆತ್ಮಪ್ರಜ್ಞೆ

ಆ ಆತ್ಮಪ್ರಜ್ಞೆ ದಿಗ್ದೇಶ ಮುಟ್ಟಿ ಎಂಟಿದೆಯೆ ರೂಪ ತಳೆದು
ಆಗೊ ಬ್ರಹ್ಮಬಿಂದು ಚೈತನ್ಯದಿಂದ ಷಡ್ಗುಣಿಸಿ ಘನದಿ ಬೆಳೆದು
ಈ ಕಾಲಕಾಲಕೂ ವಿಶ್ವಪ್ರಜ್ಞೆ ಆದಿತ್ಯರಂತೆ ಬೆಳಗೆ
ಋತುಮಾನದಲ್ಲಿ ಚಾತುರ್ಯಗೊಂಡು ನಲಿಯುವೆವು ಹೊರಗೆ ಒಳಗೆ.

ತಾನಿರುವದೊಂದು, ತಾನರಿವದೊಂದು, ಎರಡೊಂದು ಪಿಂಡಗೊಂಡು
ಮುದವಾಗಿ ನಲಿದು, ತಕ್ಕೈಸಿ ಒಲಿದು, ಎದೆಹಾಲನುಂಡುಕೊಂಡು
ಸ್ಥಿತಪ್ರಜ್ಞೆಯಲ್ಲಿ ಸಂಚರಿಸಲೆಂದು ವಿಜ್ಞಾನ ನೇತ್ರವಾಗಿ
ಮನಪ್ರಾಣಗಳಲಿ ಮೈಯಾಡಿಸುವದು ಸುಜ್ಞಾನಕ್ಷೇತ್ರವಾಗಿ.

ಬಯಲಾಗಿ ಒಳಗೆ, ಬಾನಾಗಿ ಹೊರಗೆ ಇಹುದೊಂದೆ ಜ್ಯೋತಿಯಣ್ಣಾ;
ಗಾಳಿಯಲಿ ಸುತ್ತಿ ಬೆಳಕಾಗಿ ಮುತ್ತಿ ತೆರೆಯುವದು ಏಳು ಬಣ್ಣಾ.
ಮೇಲಿಂದ ಬಂದು ಕೆಳಗಿಳಿದುಕೊಂಡು ಮೆಟ್ಟಲವ ನೆಲಿಸುತಿಹುದು;
ಬೆನ್ನಾಗಿ ಹಿಂದೆ, ಮೈಯಾಗಿ ಮುಂದೆ ಅಂಗಾಂಗ ಒಲಿಸುತಿಹುದು.

ಬಲಕೊಮ್ಮೆ ಒಲೆದು, ಎಡಕೊಮ್ಮೆ ಚಲಿಸಿ ಸಮತೂಕ ಕಲಿಸುತಿಹುದು.
ಆನಂದ ಪ್ರಕೃತಿ ಚಿತ್‌ಪುರುಷನಿಂದ ಸತ್‌ಪುತ್ರ ಸಲಿಸುತಿಹುದು.
ಈ ಗಂಧಮೂರ್ತಿ ರುಚಿಗೊಂಡು ಅರ್ತಿ ಏಳ್ಬಣ್ಣ ಪಿಂಡವಾಗಿ
ಬ್ರಹ್ಮಾಂಡ ಸ್ಪರ್ಶ ಪಡೆದಿರುವ ಪಕ್ಷಿ ಹಾಡಲಿ ಅಖಂಡವಾಗಿ.

# ಮಧ್ವ

ಹಸಿವೆಯೋ ಹಸಿವಾತವೆಂದು ಭೂತಪ್ರೇತ
ಯೋನಿಯೋನಿಯ ತಿರುಗಿ ಕಳೆದೆ ದ್ವಾಪರ ತ್ರೇತ;
ಪಂಚೇಂದ್ರಿಯದ ಪಂಚ ಬಾಣಗಳ ಬೆನ್ನೇರಿ
ಉಂಡುದನೆ ಉಂಡು ಕಂಡುದ ಕಂಡು ಮನಸಾರಿ
ಬಂದೆನಿದೊ ನಾನಹಂಕಾರಶಿಖರಕೆ ಹಾರಿ
ಮುಂದುಗಾಣದೆ ಗಾಣದೆತ್ತಿನೊಲು ತಿರುಗುತ್ತ
ಬಯಲ ಬಸಿರಿನ ಬಟ್ಟೆ ಎತ್ತೊ ಎತ್ತೋ ಎನುತ
ರೆಕ್ಕೆಯೊಡೆಯದ ಹಕ್ಕಿಮರಿಯಂತೆ ದಿಟ್ಟಿಸುತ.

ನನ್ನ ಪ್ರಾಣಸ್ಪಂದದೊಂದಿಗೇ ಮಿಣುಕುತಿಹ
ಅಂತರಿಕ್ಷದ ಅಂತರಾಳದಾಳದ ಚುಕ್ಕೆ !
ಚೆಲುವಕ್ಕೆ ನಲಿವಕ್ಕೆ ಬಲವು ಒಲವುಗಳಕ್ಕೆ
ಶುಭಮಕ್ಕೆ ನಮ್ಮ ದೃಷ್ಟಾದೃಷ್ಟಿ ಯೋಗಕ್ಕೆ.
ಉದಯಿಸೆಲೆ ಹೃದಯಗಹ್ವರದಿಂದ ಮೇಲ್ತೋರ
ಆನಂದತೀರ್ಥದಲಿ ಮಿಂದ ಮಧ್ವ ಅಪಾರ !

# ಮೋದ ಹರುಷದ ಸಸಿ

ಮೋದ ಹರುಷದ ಸಸಿಯು, ಮತ್ತೆ ಪ್ರ–
ಮೋದ ಬಿದಿಗೆಯ ಶಶಿಯು, ಪ್ರಿಯದ ವಿ–
ನೋದ ಹಿಗ್ಗಿನ ಹಸಿವು ನಂದಾನಂದವೇ ಪ್ರಾಣ.
ಊದುದಿತೆ ಉಸಿರಾಡುತಿದೆ ಬ್ರ–
ಹ್ಮಾದಿ ತೃಣಪರ್ಯಂತ ಒಂದೇ
ನಾದ ಅಹಮುನ್ಮಾದ ಬ್ರಹ್ಮಾಸ್ವಾದ ನಿರ್ಘೋಷ.

ಕಮಲವನವರಳಿಹುದು ತುದಿಮೊದ–
ಲಮಲಸಾರಸ್ವತದ ಗೀತದ
ವಿಮಲ ಪರಮಾಮೋದ ಬೋಧದ ನಿಧಿಯೆ ತೆರೆದಂತೆ;
ಮಮತೆ ಸಮತೆಯಲಡಗಿ ನಿಂತಿತು;
ಭ್ರಮಣ ಮಾರ್ಗಕ್ರಮಣ ಮಧುವನ
ಗಮನ ನುಡಿಸುತ್ತಿಹುದು ಝೇಂಕಾರದೊಳೆ ಓಂಕಾರ.

ಎದೆಗೆಯೆದೆ ಕರೆದಂತೆ, ಹೃದಯದ
ಉದಧಿ ತೆರೆತೆರೆ ಹರಿದು ಹರುಷದ
ವಿಧವಿಧದ ಚೆಲ್ಲಾಟ ಮಾಟವು ಅಲ್ಲೆ ನೆರೆದಂತೆ,
ವಿಧಿಯ ಯಾವ ವಿಲಾಸಲಾಸ್ಯವೊ
ಕದಿಯುತಿದೆ ಹೃನ್ಮನದ ಬಿನದವ;
ಅದು ಅದೋ ದಿಕ್ಕೆಲ್ಲ ಒಂದೇ ನಾದ ಪಡಿಸಾದ.

# ನೀರು

ಚಣಚಣಕು ತಣಿವಿಲ್ಲ, ಏನಿದು ಹರಿವ ನೀರಿನ ಕಳಕಳ ?
ಏಕೊ ಮೊರೆಯುತ ಎತ್ತೊ ಹರಿಯುತ ಅಳುತಲಿಹುದೇ ಕಳವಳ ?

ನೆಲದ ಎದೆಸಿಹಿನೀರು ಕಂಬನಿಗಡಲ ಒಡಲಿಗೆ ಅರ್ಪಣ.
ಯಾವ ಶ್ರದ್ಧಾಬುದ್ಧಿ ಕೊಡುತಿದೆ ತೀರಲಾರದ ತರ್ಪಣ ?

ಉಗಮದಲಿ ತೋಡುವದು ಯಾವದೊ ಎದೆಯ ಆಳದ ಜಲಹರಿ ?
ಜಲಧಿ ಕಲ್ಲೋಲದಲಿ ಕೂಡಲವಲ್ಲಿ ಮುಗಿವುದು ಈ ಪರಿ.

ನಿಲ್ಲಲಾರದ ಚಂಚಲತೆಯೋ ತೊರೆಯ ಹೆಸರಿಗೆ ಆಸರ.
ಜಲಕೆ ಜಡವೆನಲೆಂತು? ಇದಕೋ ಇಲ್ಲ ಹರಿಯುವ ಬೇಸರ.

ಆದರೂ ಇಷ್ಟೇಕೆ ಇಹುದೋ ತಂಪುನೀರಿಗೆ ತಳಮಳ ?
ಮುಗಿಲುಗನ್ನಡಿ ಬಿಡಿಸಿದಂತಿಹ ಜಲದ ಮೈಯಿದೆ ಜಳಜಳ.

ಮೋಡ ಎರೆವುದು ಮಲೆಯ ತಲೆಯಲಿ, ಬೆಟ್ಟ ಸುರಿವುದು ಕೊಳ್ಳಕೆ,
ಕೊಳ್ಳ ತೊರೆವುದು ನದಿಗೆ, ಎಲ್ಲವು ಮತ್ತೆ ಕಡಲಿನ ಹಳ್ಳಕೆ.

ಸೂರ್ಯರಶ್ಮಿಯ ಸೇರಿ ಸೇರುವದಣ್ಣ ಬಾನಿನ ಏರಿಗೆ.
ನೆಲವೆ ನೀರಡಿಸಿರಲು ಕರೆವುದು ಗಿಡಮರವ ತಾಯ್ಬೇರಿಗೆ.

ಜನ್ಮಮರಣದ ಚಕ್ರದಂತಿದೆ ವಕ್ರಮಾರ್ಗವು ನೀರಿಗೆ.
ಬೇಕು ಈ ಅಭಿಸರಣದಂದದ ಅಧಃಪತನವು ಯಾರಿಗೆ ?

ತಿರೆಯ ಎದೆಯೊಳಗಿರುವ ಕಂಪಿನ ಅಲರನರಳಿಸಲಾಗಿಯೋ
ಅರಳ ಬಸಿರಲಿ ಕಾತು ಪಾಡನು ಪಡೆದು ಕಾಲಕೆ ಮಾಗಿಯೋ
ಹಣ್ಣುರಸವೆನಿಸುತ್ತ ಜೀವದ ಹಸಿವ ತಣಿಸಲು ಬರುವೆಯಾ ?
ರಕ್ತದಲಿ ಒಂದಾಗಿ ಹೃದಯದಿ ಮತ್ತೆ ನಲಿವನು ತರುವೆಯಾ ?

ಎಲೆಲೆ ನೀರೇ, ದೂರದೀ ಗುರಿ ಈ ಪ್ರವಾಹದಿ ನೆಲೆಸಿದೆ.
ಅಂತೆಯೇ ನಿನ್ನೊಳಗಿನೊಳಗಿನ ಸ್ಥೈರ್ಯ ವೈರಿಯಲಿ ಚಲಿಸಿದೆ.

ನಿನ್ನ ಜೀವನ ಕುಡಿದು ಸುತ್ತಗೊ ಮಣ್ಣು ತುಂಬಿದೆ ಜೀವನಾ.
ಬೇಕಿಗೆತ್ತಲು ಕಣ್ಣು ತೆರೆದಿದೆ ಹುಡುಕ ಬಯಸಿದೆ ದೇವನಾ.

ತಾಯ ಎದೆಸೆರಗನ್ನು ಅವಚಿರುವಂಥ ಕೂಸಿನ ಅಂದದಿ
ಬೇರ ಹಿಡಿಯಲಿ ತಿರೆಯ ಹಿಡಿಯುತ ಮೊಗವ ತಿರುಹಿದೆ ಚೆಂದದಿ.

ಪಲ್ಲವಿಸಿ ಹೂವಾಗಿ ಹರುಹಿದೆ ಹಸಿರು ಪ್ರಾಣದ ಹಂದರಾ.
ಕತ್ತಲೆಯ ಗರ್ಭವನೆ ಬೆಳಗಿಸಬಂದನಗೊ ಆ ಚಂದಿರಾ.

ನೀರ ದಂಡೆಗೆ ಹಸಿರು ಎದ್ದಿದೆ ಗಾಳಿಗಿದೊ ತಲೆದೂಗುತ,
ಮರಮರವು ಮರ್ಮರಿಸುತಿದೆ ಹವಣಾಗಿ ಬಳುಕುತ ಬಾಗುತ.
ತಲೆಯಲಲೆಸರು ಬುಡದೊಳಿದೆ ನೆಲೆಗೊಂಡ ನಿಲವಿನ ನಿಕ್ಕಳ.
ಮರದ ನೆಲೆ ನೋಡುವದು ನಡುಗಿಸಿ ಸ್ಥಿರದ-ಚಂಚಲದಿಕ್ಕಳ.

ವೈರಿಯು ಮುಳ್ಳಿಡಬಹುದು ಆದರು ಮನದೊಳಗೆ ಇದೆ ಧೈರ್ಯವು.
ನಡುಕದಲ್ಲಿಯು ಉಡುಗಲಾರದ ವೀರ್ಯವೇ ಸೈ ಸ್ಥೈರ್ಯವು.
ಹರಿವ ಹೊಳೆಗಳ ಆಚೆ ನಡುಗುವ ಮರಗಳಾಚೆಗೆ ಒಳಗಿದೆ
ಮರದ ನಡುವಿನ ಬಯಲು ಸುತ್ತಿನ ಬನದ ಒಳಗನೆ ಬೆಳಗಿದೆ.

# ಬೆಳಕು ತುಂಬಿದೆ ಒಡಲಲು

ಬೆಳಕು ತುಂಬಿದೆ ಒಡಲಲು
ತುಂಬುಹಾಲಿನ ಕಡಲೊಲು
ಬೆನ್ಗೆ ಇಳಿಸುತ ನ್ಮೈಯ ಬಾಲವ, ತಲೆಗೆ ನೀಡುತ ಹೆಡೆಯನು,
ಹಾವು–ಜೀವವು ಎತ್ತಿ ಹಿಡಿದದೆ ಕೋಟಿ ಮಣಿಗಳ ಕೊಡೆಯನು.

ಪ್ರಾಣಪತಿ ಜೀವೇಶ ಹೃದಯದಧೀಶ ಅಂತರ್ಯಾಮಿಯು
ಗುಟ್ಟಿನೊಳು ಸುಪ್ರೇಮಿಯು
ಹುಟ್ಟಿಗೆಲ್ಲಕು ಸ್ವಾಮಿಯು
ನಿದ್ದೆಮರೆಯಲಿ ಮಿದ್ದುತಿರುವನು ಸರ್ವಕಾಮದ ಕಾಮಿಯು.

ಮುಕ್ತಲಯದಲಿ ನಡೆಯುತ
ಛಂದಭಾವಕೆ ಒಲಿಯುವಂದದಿ ನಮ್ಮ ಒಲುಮೆಗೆ ಒಲಿಯುತ
ಭಕ್ತಿ ತಾಲವ ಹಿಡಿಯುತ
ಜ್ಞಾನತೇಜದ ಗೊಂಬೆ ಮಾಡುವ ತನ್ನ ಲೀಲೆಗೆ ನಲಿಯುತ.

# ಶ್ರೀವಿಶ್ವನಲ್ಲಿ ಯಜಮಾನನಾಗಿ

ಶ್ರೀ ವಿಶ್ವನಲ್ಲಿ ಯಜಮಾನನಾಗಿ ಜೀವಾತ್ಮ ನಾನು ಬಂದೆ.
ಇಗೊ ಚಿತ್ತದಲ್ಲಿ ಪುರುಷಾತ್ಮಗಾಗಿ ಚೈತ್ಯಾಗ್ನಿ ಹೊತ್ತಿತೆಂದೆ.
ಉಸುರುಸುರಿನಲ್ಲಿ ಪ್ರಾಣವನೆ ನಿನಗೆ ಆಹುತಿಗಳಾಗಿ ತಂದೆ.
ಬಾ ದೇವ ಬಾರೊ, ಮಹದೇವ ಬಾರೊ, ಬಾ ವಾಸುದೇವ ತಂದೆ.

ಈ ಜೀವ-ಚೈತ್ಯವನೆ ಗುಡಿಯ ಮಾಡಿ ನಿಂತಿರುವ ನನ್ನ ದೇವ,
ನನ್ನೊಳಗು ಹೊರಗು ನೀ ಬಲ್ಲೆ ಜೀಯ ಕ್ಷೇತ್ರಜ್ಞ ಜೀವಜೀವ.
ಮಹಮೂರ್ತಿ ಮಾಡು, ಅಚ್ಯೊತ್ತು ಎತ್ತು ಗುರುಪಾದದಲ್ಲಿ ನನ್ನ
ಎಚ್ಚತ್ತು ನಿಂತ ಭಗವಂತ ಇನ್ನು ತಡವೇಕೆ ನನ್ನ ಚೆನ್ನ ?

ಎಷ್ಟೊತ್ತು ನಾನು ಮೊಗಹಾಕಿ ಕೆಳಗೆ ನೋಡುವೆನು ನೀರಿನಲ್ಲಿ;
ಕಂಡಂತೆ ಏನೊ ಕಾಣುವದೊ ಮೂಲ ಕಳೆಯಿಲ್ಲವೇನೊ ಅಲ್ಲಿ ?
ಮೊಗವೆತ್ತಿ ನನ್ನ ಮುತ್ತಿಟ್ಟು ನಿನ್ನ ಮೊಗದೋರು ಬೇಗ ಚೆನ್ನ.
ನೀ ಬಿಂಬನಿರಲು ಪ್ರತಿಬಿಂಬವೇಕೆ, ಬಾ ತುಂಬ ತುಂಬು ನನ್ನ.

ನಿನ್ನ ಕೃಪೆಯ ಇಳಿಬೆಳಕಿನಲ್ಲಿ ಸುಳಿಯೇರಿ ಬಂತು ಪ್ರೀತಿ.
ಜನರ ನೀತಿಯುಲಿ ಹೂತು ಬಂತು ಹೊಸದೊಂದು ಜೀವರೀತಿ.
ಸಾಕು ತಾಯಿ ಈ ಹೂವುಗಳನು ಫಲ ಪಕ್ವವಾಗುವಂತೆ.
ಅಣ್ಣ ತಮ್ಮದಿರ ಕಾಯಬೇಕು ಹುಲುದೃಷ್ಟಿ ತಾಗದಂತೆ.

ಮಣ್ಮೈಯ ತೆರೆಯ ತೆರೆದದ್ದೆ, ಉಸಿರ ಸೀಳಿದ್ದೆ ಒಂದೆ ತಡವು
ಬಗೆಬಗೆಯ ಬಗೆದು, ಬಾನೆಲರ ನೆಗೆದು ಜೀವಂತವಾಗಿ ಜಡವು
ಇದೊ ಭಿನ್ನ ಕಿರಣ, ಇಗೊ ನನ್ನ ಹರಣ, ಅಗೊ, ನಿನ್ನ ಚರಣಕಾಗಿ
ಎಲೆ ತಂದೆ, ಬಂತು ಎದೆಗೊದಗಿ ನಿಂತು ತಾಯ್ನೆರಗ ಸೇರಲಾಗಿ.

ನಂಬಿಗೆಯೆ ತಾಯಿ, ನಂಬಿಗೆಯೆ ಬಸಿರು, ನಂಬಿಗೆಯೆ ಪಿಂಡವಣ್ಣ.
ನಂಬಿಗೆಯೆ ಹುಟ್ಟ, ನಂಬಿಗೆಯ ಕಟ್ಟ, ನಂಬಿಗೆಯ ಪಡೆದು ಕಣ್ಣ,
ತಂಬಿಗಿಯ ಒಳಗೆ ತುಂಬಿರುವ ನೀರೆ ವರಶಕ್ತಿ ಎನಿಸುವಂತೆ
ಆಳಾಗಿ ಹೊರಟು ಆಳುವದು ಜಗವ ಪೆರುಮಾಳೆ ಜನಿಸುವಂತೆ.

ಏಸಗಲ ಚೆಲುವು ಆಸಗಲ ಹಿಗ್ಗು ಉಕ್ಕುಕ್ಕುತಿರಲು ಇಲ್ಲಿ
ಬಾನರಳು ಏನು ನೀರ್ಮಿನವೇನು ನೆಲಹೂವು ಏನು ಅಲ್ಲಿ
ಉಸಿರ್ತಾನವೆಲ್ಲ ರಸಗಾನ ಜಗವು ಜೀವಂತ ಮೌನವೆನಿಸೆ
ಹೊರಗಲ್ಲ ಒಳಗು ಒಳಗೆಲ್ಲ ಹೊರಗು ನೀನೆನಿಸೆ ಜನಿಸೆ ನೆನೆಸೆ.

ತಮವನೆಲ್ಲ ತಳಸೋಸಿ ಮಾಡು ಸ್ಥಿರಶಾಂತಿ ಕಾಂತಿಯಾಗಿ.
ರಜವ ಮಾಡು ಸಹಭಕ್ತಿಯಾಗಿ ಚಿರ ಜೀವಸತ್ತ್ವವಾಗಿ.
ಮನವನೊಪ್ಪಿಸಿದೆ ನಿನ್ನ ನಾಲಗೆಗೆ ಆಗು ನನ್ನ ಬಾಯಿ.
ಮನೆಯನೊಪ್ಪಿಸಿದೆ ಪಾದದಲ್ಲಿ, ತಿಳಿದಂತೆ ಮಾಡು ತಾಯಿ.

ಹೃದಯ ಸಮುದ್ರ

# ಮೈಯು ನೀನು

ಮೈಯು ನೀನು, ನೀ ಮಿಡುಕ, ನನ್ನ ಒಳುಬಗೆಯ ತಿಳಲು ನೀನು.
ಇರೆಯು ತೊರೆಯು, ನೀ ನೀರೆ ವೀರೆ ರಸರಸವು ಹಾಲುಜೇನು.
ನಿನ್ನಲ್ಲಿ ಅಲ್ಲದೆಲ್ಲೆಲ್ಲು ನನಗೆ ವೈಷಮ್ಯ ಕಂಡುಬರಲಿ.
ತಾಯಿ ನಿನ್ನ ಒಳಲೊಡನೆ ಮಾತ್ರ, ಈ ಜೀವ ಸಾಮ್ಯವಿರಲಿ.

ತಾಳಬೇಕು ನಾ; ಬಾಳಬೇಕು ನೀ; ಇಳಿಯಬೇಕು ಆತ.
ಆತನಿಂದಲೇ ಆತ್ಮವಾಗಿ ತಂತಾನೆ ಜೀವಜಾತ
ಒಳ್ಳೆತನವ ಉಳ್ಳೊಡೆಯರಾಗಿ ಅದರಾಕೆವಾಳರಾಗಿ
ಇಳೆಯ ಬಾಳನೇ ಮೆರೆಸಲಾರವೇ ಬಾನ ಮೀನರಾಗಿ ?

ಬಗೆಯಬೇಕು, ಒಳುತಿಳಿವು ಬೇಕು, ಕುರಿತರಿವು ಬೇಕು ಕೊನೆಗೆ.
ವಿಂಗಡವು ಬಾಳ ಸಂಗಡವೆ ಬೇಕು, ಪಂಗಡವು ಏಕೆ ನನಗೆ ?
ಒಳುವೆಲ್ಲ ನನಗೆ ಒಳಿತಾಗಿ ತೋರಿ ಒಲವತ್ತ ಹರಿಯುತಿರಲಿ.
ಒಲಿದದ್ದೆ ಒಳಿತು ಎಂಬಂತೆ ಜೀವ ಕುಣಿಕುಣಿವ ಅರಿವು ಇರಲಿ.

ಕಲ್ಲಾಗಲೇನು ಹೊಲ್ಲಾಗಲೇನು ಅದು ಬಲ್ಲತನಕೆ ಸಲ್ಲ.
ಆ ನಲ್ಲೆ ತಾನು ಇರುವಲ್ಲೆ ನಿತ್ಯ ಇರುತಿಹನು ಒಬ್ಬನಲ್ಲ.
ಅಸವಸವು ಬೇಡ, ರಸಕಸಿಯು ಬೇಡ, ಹೊಸರಸಿಕವೃತ್ತಿ ಬೇಕು.
ಕಳಿಗೆಲ್ಲೆಯಿಲ್ಲ, ಕಾಲನಿಗೆ ಉಂಟು; ಸೈರಣೆಯ ಇರವೆ ಸಾಕು.

ಬೇಕು ಬೇಡ ಈ ಎರಡರೊಳಗೆ ಅರಿವೆಲ್ಲ ಅಡಗಿ ಇಹುದು.
ಆ ಅರಿವಿನಲ್ಲಿ ಇರವಾಗೆ ನೀನು ನಾನೇನೊ ಬದುಕಬಹುದು.
ನಿನಗೇನು ಬೇಕು ಅದು ನನಗೆ ಬೇಕು, ಬೇಡಾದುದೆನಗೆ ಬೇಡ.
ಈ ಜ್ಞಾನಪಿಂಡ ಬೆಳೆಯುತ್ತ ಬರಲಿ ಹುಟ್ಟಾನೆ ಮಾತೃಮೂಢ.

# ಜೊಂಪಿಸಿತ್ತು ಮಣ್ಣು

ಜೊಂಪಿಸಿತ್ತು ಮಣ್ಣು ಮಣ್ಣು
ಎವೆ ತೆರೆಯದ ಕೂಸು–ಕಣ್ಣು
ಮೊಳಕೆ ಬರದ ಗಣಿಕೆಗಣ್ಣು
ಎಲ್ಲೊ ಇತ್ತು ಚಿಗುರುಬಣ್ಣ
ಹೂಹೂವಿನ ಚಿತ್ರವರ್ಣ
ನಿದ್ರಿಸುತಿದೆ ಕಂಪಕಂಪ
ಅಡಗಿದೆ ಎಲೆ ಪಸರ ಜೊಂಪ
ಸವಿ ನುಂಗಿದೆ ತನ್ನ ಹಂಪ
ಬಸಿರು ಬಯಲು ಪೊಳ್ಳುಗುಂಭ
ಬಂಜೆಗಾಳಿ ಅದರ ತುಂಬ
ಜಪಿಸುತಿರೋ ಶಪಿಸದಿರು
ಕುಪಿಸದಿರೋ ತಪಿಸುತಿರು
ಉಸಿರು ಮಸೆದ ಉರಿಯು ಆಗ
ಬೇಗೆ ಹತ್ತಿದಂತೆ ಬೇಗ
ತಲೆ ಮೊಳೆವುದು ಬಿದ್ದ ಬಿತ್ತು;
ಸಿಂಪಿ ತೆರೆದು ಬಹುದು ಮುತ್ತು.
ಅಲ್ಲಿವರೆಗು ಮೌನ ಗುರು.
ಅದರ ಶಿಷ್ಯ ನೀನಾಗಿರು.

# ನೋವೋ ನೋವು

ಓಹೋ ನೋವು ನೋವೋ ನೋವು
ಜೀವವೆ ಇಲ್ಲದ ಒಣಒಣ ಸಾವು;
ಕಾಯದಕಾಯದ ಬಂಜೆಯ ಹೂವು
ಪೊರೆಯಿದೆ; ಹೋಗಿದೆ ಎಲ್ಲೋ ಹಾವು.

ನಾನೆನ್ನದು ನನೆಯದ ಹುಸಿ ಜೀವ
ತಾನಿಗೆ ಸಾಕಾಗದು ತುಸು ಭಾವ
ಜೊಳ್ಳೋ ಜೊಟ್ಟ, ಟೊಕ್ಕನೆ ಖೊಟ್ಟ
ಹುರುಳಿಲ್ಲದ ಬರಿ ಶಬ್ದವು ಹುಟ್ಟಿ
ಎಣಿಸಿದರೇನದು, ಗುಣಿಸಿದರೇನು ?
ತಲೆಕೆರೆ ತುಂಬಾ ಸೀರೂ ಹೇನೂ !

ಧೃಷ್ಟಬುದ್ಧಿಯಿದೆ ಕುಂತಲದಲ್ಲಿ;
ಮದನವಿಷಯೆ ಅವರಾಡುವರಲ್ಲಿ.
ಬಾನಿನಲ್ಲಿ ಘನಛಾಯೆಯು ಇಲ್ಲ;
ಕೃಷ್ಣ ಕಾಣದೇ ಮಾಯೆಯು ಹೊಲ್ಲ.
ನೋವಿನಲ್ಲಿ ನೋಂಪಿಯ ಹಸಿ ಬೇಕು;
ಜೀವಕೆ ದೇವನ ರಸ–ಕಸಿ ಬೇಕು.
ಮಂತಣದಲ್ಲಿಯು ಚಿಂತನವಿರಲಿ;
ಚಿತ್ತವು ಒಳಗನು ಚಿತ್ರಿಸಿ ಬರಲಿ.
ತಂತಿ ತಂತಿ ತಂತನದ ವಿತಾನಾ
ಹಾಸು ಹೊಕ್ಕು ಮುಂಮೌನಾ ಗಾನಾ !

# ಪ್ರಾಣಪಕ್ಷಿ

ಕಣ್ಣು ಕಾಮಾಕ್ಷಿ, ಮನವು ಮೀನಾಕ್ಷಿ,
ಚಿತ್ತ ಚೈತ್ಯ ಸಾಕ್ಷಿ.
ಪಕ್ಷ ಪುಚ್ಛ ವ್ಯೈ ಚೂಚು ಚಾಚಿದರು
ಬೇರೆ ಪ್ರಾಣಪಕ್ಷಿ.

ದೃಷ್ಟಿ ದಿಟವೆಂಬೆ, ಸೃಷ್ಟಿ ಸಟಿಯೆಂಬೆ,
ದೃಷ್ಟ ನಷ್ಟವೆಂಬೆ.
ಕಾಂಬುವನ ನಂಬೆ, ಹುಸಿ ಚಿಗುರ ಕೊಂಬೆ,
ಓ ಹೇಡಿ—ಮಣ್ಣ ಗೊಂಬೆ !

ಕಿಡಿ ಇಲ್ಲದಲ್ಲಿ ಕುಡಿ ಒಡೆವುದೆಂತು ?
ಮಿಡಿ ಹಿಡಿವುದೆಂತೊ ಕಾಣೆ.
ತಂತಿ ಝುಣಗುಡದ ಪೊಳ್ಳು ಸೊಟ್ಟೆ
ಎನಿಸೀತು ಹೇಗೆ ವೀಣೆ ?

# ರಕ್ತಾಕ್ಷಿ

ರಕ್ತಾಕ್ಷಿ ರಕ್ತಾಕ್ಷಿ ಭೌತಬಿನ್ನಣದಕ್ಷಿ
ತಾರಿಸಲಿ ಬಾರಿಸಲಿ ಮಾತಿನ ಪಟಾಕ್ಷಿ.
ಇರುಳು—ಕುತ್ತಕೆ ಅತ್ತ ಹೊತ್ತುರುಳಿಸಿತು ಕತ್ತು.
ಬಂಜೆ ಸಂಜೆಯ ಸುತ್ತುಮುತ್ತು ಗುಲಬಾಕ್ಷಿ.

ಕರಿಗೊರಳ ಸುತ್ತ ಹಾವಿನ ಹುತ್ತ, ಕೆಳಗಿತ್ತ
　　ಜೋತಾಡುತಿದೆ ತಾನೆ ಒಂಟಿ ರುದ್ರಾಕ್ಷಿ.
ಜೆಕ್ಕಿ ಬೆಳಗಲಿ ಕಾಕ—ನಿಶೆಯಲ್ಲಿ ದಿಶೆಯಲ್ಲಿ
　　ಧ್ರುವನ ಅನಂತ್ಯಕ್ಕೆ ಕೂಟಸಾಕ್ಷಿ.

ಆ ರಕ್ಷಿ ಈ ರಕ್ಷಿ ದಿವ್ಯಮಾತೆಯ ರಕ್ಷಿ.
ಹಿಮನಗದ ಜಗದ ಸೌಭಾಗ್ಯ ಯಕ್ಷಿ.

# ಮುಗಿದಿತ್ತು ಬೀದಿ ಮಾತು

ನೆಲ ಹೊರಳುತಿತ್ತು
ನೀರುರುಳುತಿತ್ತು
ಬೆಳಕರಳುತಿತ್ತು ಆಗ.

ಬಿರುಗಾಳಿ ಧೂಳಿ
ಆಕಾಶ ಕಾಳಿ
ಎತ್ತಿತ್ತು ಅಪ್ಸರಾಗ.

ಅಬ್ಬಬ್ಬ ಚುಕ್ಕೆ
ಏನೊಂದು ದಿಕ್ಕೆ
ಬಾನೆಲ್ಲ ತೂತು ತೂತು.

ಬೆಂಕೆಲ್ಲ ಹೂತು
ಮೌನಕ್ಕೆ ಸೋತು
ಮುಗಿದಿತ್ತು ಬೀದಿ–ಮಾತು.

# ಹಸುಗೂಸೋ ಇದು!

ಹಸುಗೂಸೋ ಇದು ಹೊಸಗೂಸೋ ಇದು
ಮಾಸಿಲ್ಲ, ಇದ ಮೂಸಿಲ್ಲ.
ಹೊಸ ಬಗೆ ನಸುನಗೆ ಗಾಳಿಯ ದಾಳಿಯು
ಬೀಸಿಲ್ಲ, ಇದ ಕಾಸಿಲ್ಲ.

ಕಳೆ ಮೀರಿದ ಬೆಳೆ, ಅಪರೂಪದ ತೊಳೆ
ಬಿಚ್ಚಿಲ್ಲ, ಇದ ಮುಚ್ಚಿಲ್ಲ.
ಬಾಳ ಕೋಣೆಯೊಳು ಬಿಸಿಲುಕೋಲು ಇದು
ಬಿತ್ತಿಲ್ಲ, ಇದ ಕೆತ್ತಿಲ್ಲ.

ಆವ ತವರೊ ಅನುಭವಿಸಿದವರೆ ಇದ
ತಿಳಿದಿಲ್ಲ, ಇಳೆಗಿಳಿದಿಲ್ಲ.
ಅಲ್ಲವೆನಲಿ ಅಹುದೆನಲಿ ಬಿಡಲಿ ಇದು
ಮಾತಿನತೊಡಿಗೆಯ ತೊಟ್ಟಿಲ್ಲ,
ಅದ ಬಿಟ್ಟಿಲ್ಲ.

# ಒಂದು-ಹಲವು

To be or become something, to bring some
into being is the whole labour of the force of Natu

—Sri Aur

ಇರುವುದೊಂದೆ ನೆರೆದು ಮುಂದೆ ಹಲವು ಫಲವ ಪಡೆವುದು.
ಅರಿವುದೊಂದೆ ಜರೆತುಕೊಂಡೆ ಹಿಗ್ಗ ಪಡೆದು ನಡೆವುದು.
ಬೀಜದಲ್ಲಿ ಮರಗಳಲ್ಲಿ ಜನನಿಪ್ರಕೃತಿ ಮೆರೆವಳು.
ಅರಿವಿನಲ್ಲಿ ಇರವ ಬೆಳೆಸಿ ಜನಕಪುರುಷ ತೆರೆವನು.

ಮನದ ಗಂಟ ಕಟ್ಟಿಕೊಂಡು
ಬೆನ್ನಮೇಲೆ ಹೊತ್ತುಕೊಂಡು
ಜನುಮವೇಕೆ ಕಳೆವುದು ?
ತತ್ತ್ವ ನೀನು ಬೇರೆ ಏನು ?
ಅದೇ ಆಗಿ ನಾನು ನೀನು
ವಿಶ್ವದಲ್ಲಿ ಮೊಳೆವುದು.

ಓಂ ನಮಃ ಶಿವಾಯ ಎಂದು
ಪ್ರಾಣ-ಲಿಂಗ-ಶಕ್ತಿ ಒಂದು
ಅನುಗ್ರಹವ ತಾಳುವಾ.
ಏಕಾತ್ಮದ ಶರಣರಾಗಿ
ದಿವ್ಯಸೃಷ್ಟಿ ಕರಣರಾಗಿ
ವಿಗ್ರಹದೊಲು ಬಾಳುವಾ.

ಇದೇ ಸಂಧಿ ಇದೇ ಶಾಂತಿ ಮನುಕುರುಕುಲ ಕ್ಷೇತ್ರಕೆ.
ಈ ವಿರಾಟ ದೊಡ್ಡ ಆಟ ಪಾತ್ರ ಬೇರೆ ನೇತ್ರಕೆ.

ನಟನಿಗೆ ಜಯ, ನಾಟಕಕ್ಕೆ ಜಯ ನಾಟಕಕಾರಾ
ಸಾಕ್ಷಿಪುರುಷ ದೃಶ್ಯಗಳಲಿ ನೀ ವಿಶ್ವಾಕಾರಾ.

ಬ್ರಹ್ಮದಲ್ಲಿ ಮಾಯೆಯೆಂದೊ
ಮಾಯೆಯಲ್ಲಿ ಬ್ರಹ್ಮವೆಂದೊ
ಶಬ್ದದಲ್ಲಿ ಮೂಡಿದೆ.

ಶ್ರದ್ಧೆಯಂತೆ ಬುದ್ಧದೇವ
ದೇವನಂತೆ ಪ್ರಕೃತ ಜೀವ
ಈ ಭಾವ ಹಾಡಿದೆ.

# ಗಿರಿಶಿಖರ

Our right & natural road is towards the Summits.

—Sri Aurob

ಅಗೊ ಭೂಮಿಹೃದಯ ಗಿರಿಶಿಖರಗಳಲಿ ಕೈಮೊಗ್ಗೆ ಮೇಲೆ ಮುಗಿಸಿ,
ಅರ್ಪಿಸುತ್ತಲಿವೆ ಭಕ್ತಿಯನ್ನು ಬಾನಲ್ಲಿ ಸತ್ತ್ವ ಚಿಗಿಸಿ.
ಕೊಳಕುಕೊಳ್ಳದಲಿ ಹುಚ್ಚುಹಳ್ಳದಲಿ ಎಷ್ಟು ದಿವಸ ನಡೆವೆ ?
ಎತ್ತರಕ್ಕೆ ಬಾರಣ್ಣಾ, ಅಲ್ಲಿ ನೀ ಪಡೆವುದನ್ನು ಪಡೆವೆ.

ತಿರುಮಲೆಯ ಕಡೆಗೆ, ಶ್ರೀಶೈಲದೆಡೆಗೆ, ಶೃಂಗೇರಿ ಮಾರ್ಗವಾಗಿ
ಬೆಳಗುಳದ ಬೆಟ್ಟ, ಆ ಪೂರ್ವಘಟ್ಟ ಜೀವಕ್ಕೆ ಸ್ವರ್ಗವಾಗಿ
ಎಂದಿನಿಂದಲೋ ಸೆಳೆಯುತಿಹವು ಯಾತ್ರಿಕರ ಮೋದದಿಂದ.
ಬದುಕು ಮಾಡಿಕೊಂಡಿಹುದು ಮನುಜಕುಲ ಆ ಪ್ರಸಾದದಿಂದ.

ಹೊಳೆಗೆ ತಾಯಿಮೊಲೆಯಾಗಿ ಬಾಳುತಿವೆ ಸರ್ವಪರ್ವತಾಗ್ರ.
ಮನಕೆ ತವರುಮನೆಯಾಗಿ ನೆಲೆಸಿಹವು ತಾನೆ ತಾ ಉವಗ್ರ.
ಹೊಲಕೆ ಮಣ್ಣು ಆ ಮನೆಗೆ ಕಲ್ಲು ಹೆರುತಿಹವು ಏನು ಒಲವು !
ಬಿಸಿಲುಗಾಲದಲಿ ನೆರೆಯ ತರುವವೋ ಗಂಗೆಗಳಿಗೆ ಕೆಲವು.

ಗುಡ್ಡದಲ್ಲೆ ಗುಡಿ ಕೊರೆದವರಲ್ಲ ಕಣ್ಗಂಡ ಓಜರೆಲ್ಲ.
ಶಿಲ್ಪವಲ್ಲ ನವಕಲ್ಪಸೃಷ್ಟಿ ಆ ಕಲೆಗೆ ಮರಣವಿಲ್ಲ.
ಧ್ಯಾನಲೀದ ಮನ ಏಳೆ ತೊಳೆದು ಅಜ್ಞಾನದಾ ಕಲಂಕ
ಜ್ಯೋತಿ ಜೀವನವೆ ಮೂರ್ತವಾದಂತೆ ಜೀವ ದೇವತಾಂಕ.

ಕಲ್ಲಿನಲ್ಲೆ ದೇವತ್ವ ಮೂಡಿ ಆದರ್ಶವಾಗುತಿರಲು
ಮನುಜನಲ್ಲಿ ಯಾ ರೋಗ ಮೂಡಿ ಜೀವನವೆ ಬೊಕ್ಕುಬೊರಲು
ಆಗುತಿಹುದೊ ? ಆ ಬೀಜ ಹುರಿದು ನಿರ್ನಾಮಗೊಳಿಸಲಹುದು.
ಅಲ್ಲಿ ಇಲ್ಲಿ ಒರಗುವದವೇಕೆ, ತುದಿಯಲ್ಲೆ ಫಲವು ಬಹುದು.

# ಗೆಳೆಯ ಶಂಕರಗೌಡರಿಗೆ

ಶಿವಾಯನಮ ಓಂ ಶಿವಾಯನಮಃ ದಿಮುಡಿ ಮಿಡಿಯುತಿತ್ತು.
ಏಕನಾದವ್ರೂ ಶಿವಾಯನಮ ಓಂ ಶ್ರುತಿಯ ಹಿಡಿಯುತಿತ್ತು.
ಶಿವಾಯ ನಮ ಓಂ ಬಯಲಿನಲ್ಲಿ ಪಡಿನುಡಿಯು ಸಿಡಿಯುತಿತ್ತು.

ತಲೆಯ ಮೇಲೆ ಎಲ್ಲಿಂದೊ ಬಂತೊ ಈ ನಾದ ಗಾಳಿ ಗುದ್ದಿ.
ಗೆಳೆಯ, ನೀವು ಮೈಗರೆದಿರೆಂದು, ಛೀ ! ನಂಬಬರದ ಸುದ್ದಿ.
ಎಡದ ಮೈಯ ನಡುಗಿಸುತ ಬಂತು, ಕ್ಷಣ ಮಂಕು ಆಯ್ತು ಬುದ್ಧಿ.

ನನ್ನ ಜೀವನದಿ ನೀವು ತೇಲಿದಿರಿ ಚುಕ್ಕೆ ತೇಲುವಂತೆ.
ಗೆಲುವಿನಲ್ಲೆ ಒಳಸೋತಿರಣ್ಣ ಸವಿಗೆಳೆಯ ಸೋಲುವಂತೆ.
ಆಪತ್ತಿನಲ್ಲಿ ಸಂಪತ್ತಿನಲ್ಲಿ ನೆರವಾಗಿ ಸಾಲುವಂತೆ.

ನಿಮ್ಮ ಸ್ನೇಹಝುರಿ ಏಕತಾನ ಸ್ವರಮೇಳದಂತಭಂಗ.
ದಾಸೋಹ ಶರಣ ಜೀವನದ ರೀತಿ ಕಂಡಿತ್ತು ದೇವಲಿಂಗ.
ನಿಮ್ಮ ಅಭಿರುಚಿಯ ಗಂಧಮೂರ್ತಿ ಪ್ರದ್ಯುಮ್ನನಾದನಂಗ.

ಮೂಡಲದ ಕಡಲ ಗುಡುಗಾಟದೊಡನೆ ಸಂಗಡಿಗನಾಗೆ ಬಂತು.
ಆ ದಿವ್ಯಜೀವನದ ಸವಿಯ ನೋಡಿ ನಂಬಿಗೆಯು ನೆಲಸಿ ನೋಂತು.
ತಂತಂತಿಯಾಗಿ ಸರಿಜೀರು ಹಿಡಿದಿಹುದು ನಿಮ್ಮ ಜೀವತಂತು.

ಒಬ್ಬರಾಗಿ ಬರಲಿಲ್ಲ ನೀವು, ಹಲವರೊಬ್ಬರಾಗಿ ಬಂದು
ಏರಿದಿರಿ ಮುಂದೆ, ಸಾರಿದಿರಿ ಹಿಂದೆ, ಸರಿ ಒಕ್ಕಲಾಗಿ ಸಿಂದು
ಬೆಳೆಯುವಾಗಲೇ ಮೇಲಿನವರಿಗೂ ಗೊಬ್ಬರಾಗಿ ಎಂದು.

ಒಂಟಿಮುರಿಗೆಯಲಿ ಹಳ್ಳಹಿಡಿದು ಹೋಗುತ್ತಲಿತ್ತು ನೀರು.
ಕಂಠದಲ್ಲಿ ನೆಲೆಗೊಂಡು ಇತ್ತು ಕನ್ನಡದ ತಾಯಿಬೇರು.
ಬಯಲುಸೀಮೆಯಲಿ ಉರುಳುತಿತ್ತು ಪ್ರಭುದೇವರೊಂದು ತೇರು.

ದಾನವಾಗಿ ಮೂಡಿತ್ತು ಜನರ ಅಜ್ಞಾನಕೆದ್ದ ಕ್ಷೋಭ.
ನಿಮ್ಮ ಮೌನ ಮನೆಮಾಡಿ ಇತ್ತು ಸಾಹಿತ್ಯ ರಸಿಕ ಶೋಭ.
ಕನ್ನಡಕ್ಕೆ ನೀರೆರೆದ ಲೋಭದಲಿ ನಾಡಿಗಾಯ್ತು ಲಾಭ.

ನಿಮ್ಮ ಬದುಕು ಕಾಶ್ಮೀರಿ ಶಾಲು, ಅದು ಅಲ್ಲ ತೇಪೆ ಕವುದಿ.
ಆದರೇನು ಅನುರಾಗಕಹುದು ವೈರಾಗ್ಯಕೂನು ಹಾದೀ.
ತಾಯಿ ಅವ್ವನೆಂದೊಪ್ಪದವನು ತಂದೆಯನು ಅಪ್ಪಬಹುದೇ ?

ಶ್ರಾವಣಕ್ಕೆ ಶ್ರುತಿ ಮೀರಿ ಬಂತೊ, ಹೆಗಲಲ್ಲಿ ಇರಿಸಿ ಕಂಥೆ
ಜೋಗಿ ಎದ್ದಂತೆ ಅಲಕನೆದ್ದು ಮುಗಿಸಿದಿರಿ ಒಂದು ಸಂಥೆ.
ಏರು ಜೀರಿನಲಿ ರಾಗ ನಡೆದಿರಲು ತಂತಿ ಹರಿಯುವಂತೆ.

ಬಾಳಿನಲ್ಲಿ ಕೈಹಿಡಿದು ನಡೆಸಿದಿರಿ ಜೊತೆಯ ಅಣ್ಣಗಳನು.
ತಮ್ಮಗಳಿಗೆ ಕಂಡದ್ದು ತೋರಿ ತೆರೆಸಿದಿರಿ ಕಣ್ಣುಗಳನು.
ಹೆಣ್ಣುಗರುಳಿನಲಿ ತೂಗಿ ನೋಡಿದಿರಿ ಹೊನ್ನು ಮಣ್ಣುಗಳನು.

ಭೋಗವಲ್ಲಿ ಜೊತೆಯಾಗಿ ಬೆಳೆದು ರೋಗಕ್ಕು ವೈಯ ಮಸೆದು
ಯೋಗಕಾಗಿ ಪಾಡಾಗಿ ಬಂದು ಗುರುಪಾದಕಾಗಿ ಒಸೆದು
ಜೊತೆಗೆ ನೋವಿನಲಿ ಜೊತೆಗೆ ಸಾವಿನಲಿ ಆದ ರೀತಿ ಹೊಸದು.

ಒಕ್ಕಲಿಗರಂತೆ ಒಕ್ಕಲಿಗರಾಗಿ ನೇಗಿಲವೆ ಮುದ್ರೆಮಾಡಿ
ನಾಳೆ ಬರುವ ಬೆಳೆಗಾಗಿ ಕಾದ ಹೊಲದಲ್ಲಿ ಜಾಗ ನೋಡಿ
ತಾಯಿ ತಂದೆಗಳ ಪಾದದಲ್ಲಿ ಮುಳುಗಿದಿರಿ ಬರಲು ಮೂಡಿ.

ಕಲ್ಲುಮಂಟಪದ ನೆರಳಿನಲ್ಲಿ ಮಲಗಿದಿರಿ ಒಂದು ಜಾವ
ಯಜಮಾನರೆಲ್ಲೊ ಆ ಬಲಕೆ ನೀವು ತೋರಿಸಲು ನಿಮ್ಮ ಠಾವು.
ಅಮರ ಜೀವನಕೆ ಸಾಕ್ಷಿಯಾಗಿ ಮೂಡಿಹುದು ಅಡಕೆಹೂವು.

# ಆಪ್ಯಾಯನ

ಓ ಲಿಂಗವೆ, ಓ ಅಂಗವೆ, ಓ ಕೂಡಲಸಂಗಾ !
ಓಂ ಆಪ್ಯಾಯನ ಪಡೆಯಲಿ ಈ ಅಂಗಾಂಗಾಃ.
ನುಡಿ ಉಸಿರೂ ಕಣ್‌ಕಿವಿಯೂ ಒಳಹೊಂದಿಕೆ ವಾಗಿ
ಬಲಗೊಳ್ಳಲಿ ಇಂದ್ರೇಂದ್ರಿಯ ಆದರಿಂದಾಗಿ.

ನಾನಾತನು ನೀನಾತನು ತಾನ್ ತನ್ನದು ನೋಡಾ
ಅದು ನಿನ್ನನು ನೀನದನ್ನು ನಿರಾಕರಿಸಬೇಡಾ !
ಆತನಾಕೆ ಆಕೆಯ ತನು ಒಲಿದೊಲದವ ಬಲ್ಲಾ.
ಉಪನಿಷದಿದು ಇದು ಬ್ರಹ್ಮಃ ಅದು ಇದು ಉದು ಎಲ್ಲಾ.

ಒಳಹೊರಗನು ಒಳಗೊಳ್ಳುವ ಒಲವಿನ ಹೃತ್ಪಿಂಡಾ
ಸಮ್ಯಕ್‌ಸ್ಥಿತಿ, ಸಮ್ಯಕ್‌ಗತಿ, ಸಮ್ಯಕ್ ಬ್ರಹ್ಮಾಂಡಾ.
ಗುರುಶಿಷ್ಯರ ಸಂವಾದದೊಳಿದೆ ಜೀವದ ಧರ್ಮಾ.
ಬ್ರಹ್ಮಭಾವ ನಿರತವಿರಲಿ ನಿಜಜೀವನ ಕರ್ಮಾ.

# ಸಹಸ್ರತಂತ್ರೀ ನಿಃಸ್ವನದಂತೆ

ಸಹಸ್ರತಂತ್ರೀ ನಿಃಸ್ವನದಂತೆ
ಮಾತರಿಶ್ವನಾ ಘನಮನದಂತೆ
ಗುಡುಗಾಡುತ್ತಿದೆ ಗಗನದ ತುಂಬ
ಪ್ರಣವ ಪ್ರವೀಣನ ನಾದಸ್ತಂಭ.

ಏಕದಿಂದಲೇ ಉದಿಸಿದೆ ಸರ್ವ.
ಐಕ್ಯ ಧರಿಸಿಯೇ ಆಳುವನೊರ್ವ.
ಆ ಒರ್ವನೊಳೇ ಸರ್ವವು ಸೇರಿ
ಜಯವನು ಸಾರಲಿ ಧರ್ಮದ ಭೇರಿ.

ದದದಾ ದವದೋಂ ದಮುದಯ ದತ್ತೋಂ
ದಿಕ್ತಟ ತಟವಟ ಧಿಗಿದಂ ಧಿಕ್ತೋಂ
ನಿರ್ವ್ರಂಧ್ರದೊಳೆದ್ದಿತು ಓಂ ನಾದ
ತಾಂಡವೇಶ್ವರನ ಅಖಂಡವಾದ.

ಸತಿಮುಖಸುಸ್ಮಿತ ಜನಿತ ಸುವೇದ.
ಶರಣನ ಚಿದ್ಗತಿ ಶರಣ್ಯವೇಧ
ಮಧುರಾಭಕ್ತಿಯ ಮಧುರಾ ಗೀತ
ವೇಣುಧ್ವನಿಯಲಿ ಆತ್ಮಪ್ರೀತ.

ಮಾನವ–ದಾನವ–ದೇವ ದೇವತಾ.
ಯುಗಯುಗ ಗರ್ಭಿತ ಜೀವ ಜೀವಿತಾ
ಮೂರ್ತಿತವಾಗಲಿ ಪ್ರಾರ್ಥನೆಗಾಗಿ
ಉದ್ಭವ ಭವಿಷ್ಯ ಸಾರ್ಥಕವಾಗಿ.

ಸಹಸ್ರಾರವಿಂದೋತ್ಥಿತಬಾಲೆ
ಬ್ರಹ್ಮಹೃದಯರತಿ ಸುಷುಪ್ತ ಜ್ವಾಲೆ
ಏನಿದೆ ? ಏನಿದೆ ? ಏನಾಮೇಲೆ ?
ಕೃಪಾಪುಷ್ಪಗಳ ಅನಂತಮಾಲೆ.

ಧರ್ಮಮೇಘವೇ ವರ್ಷಿಸುವಂತೆ
ಸತ್ಯದ ಸತ್ತ್ವವ ಸ್ಪರ್ಶಿಸುವಂತೆ
ಧರಣಿಯ ಕೆಚ್ಚಿಲು ಹರ್ಷಿಸುವಂತೆ
ಬರಲಿದೆ ಮಳೆ ಉದ್ಘರ್ಷಿಸುವಂತೆ—

—ಸಹಸ್ರತಂತ್ರೀ ನಿಃಸ್ವನದಂತೆ

# ಹೃದಯಸಮುದ್ರ— ಕವನಗಳ ಪ್ರಥಮಚರಣಗಳ ಅಕ್ಷರಾನುಕ್ರಮಣಿಕೆ

# ಭಾವಸಂದರ್ಭ ಸೂಚಿ

೧. ಶ್ರೀ ಅರವಿಂದರ ಅತಿಮಾನಸ ಸಾಕ್ಷಾತ್ಕಾರದಿಂದ ಬಂದ ಸಂಸಾರೋತ್ತಾರಕ ಕರೆಯನ್ನೇ ನೆನಿಸಿ ಈ ಭಾವಲಹರಿ ಉತ್ಕಟತೆಯನ್ನು ತಾಳಿದೆ.

೨. ಶ್ರೀ ಅರವಿಂದರ ಭಾವಚಿತ್ರದ ದರ್ಶನದಿಂದ ಉದ್ದೀಪ್ತವಾದ ಚಿತ್ರ ಮತ್ತು ಭಾವ.

೩-೪-೫. ಮೊದಲನೆಯದು ನಮ್ಮ ನಮ್ಮ ಚಿತ್‌ಪ್ರಕೃತಿಯ ಪುರುಷನಿಗೂ, ಸರ್ವಕ್ಷೇತ್ರಗಳ ಕ್ಷೇತ್ರಜ್ಞನಿಗೂ ಸಂಬಂಧ ಬೆಳೆಯುವಂತೆ ಶ್ರೀ ಗುರು ಕರುಣಿಸಬೇಕೆಂಬ ಪ್ರಾರ್ಥನೆ.

ಎರಡನೆಯದು ಮಾತೃಶ್ರೀಯವರ ನೆನಪು ಜನ್ಮಜನ್ಮಾಂತರದ ಸ್ಮೃತಿಯ ಆಳದಲ್ಲಿ ಮಿಸುಕಾಡುವದೆಂಬ ಸ್ಫುರಣದಿಂದ ಬಂದುದು.

ಮೂರನೆಯದು ಒಂದು ವಿಶೇಷ ಅನುಭವ. ಅದರ ವರ್ಣನೆ ಅಲ್ಲಿಯೇ ಇದೆ.

೬. ಶ್ರೀ ಅರವಿಂದರ ತನ್ಮಯತೆಯ ಚಿತ್ರ ಇಲ್ಲಿ ಮೂರ್ತಿಸಲಾಗಿದೆ.

೭. ಶ್ರೀ ಅರವಿಂದರ ಮತ್ತು ಮದರ್ ಅವರ ದರ್ಶನಭಾವವು ಒಳಗೆ ಉದ್ದೀಪನಗೊಂಡಾಗ ಕಂಡ ದರ್ಶನವೈಚಿತ್ರ್ಯ ವರ್ಣಿತವಾಗಿದೆ.

೮. ಶ್ರೀ ಗುರುಸ್ಮರಣೆ ಗುಡಿಯ ಗಂಟೆಯ ಆಹ್ವಾನದಂತೆ ಉದ್ದೀಪಿಸಿದಾಗ ಜೀವನದಲ್ಲಿ ನರ್ತನದಂಥ ಸೊಗಸು ಮೂಡುವದು.

೯. ೫ ಡಿಸೆಂಬರ ೧೯೫೦ರಂದು ಶ್ರೀ ಅರವಿಂದರು ದೇಹವಿಟ್ಟರು. ಅವರ ಸಮಾಧಿಯ ದರ್ಶನವನ್ನು ಮಾಡಿಕೊಂಡು ಆಶ್ರಮದಿಂದ ಮರಳುವಾಗ ಹೃದ್ರಂಗದಲ್ಲಿ ಅನುಪಮ ಪ್ರತಿಮೆಗಳ ಒಂದು ಜಾತ್ರೆಯೇ ನೆರೆಯಿತು. ಅವುಗಳನ್ನು ಭಾವಗಮ್ಯವಾಗಿ ಮಾಡಿಕೊಳ್ಳಲು ಕಲ್ಪನಾಸೂತ್ರದಿಂದ ಪವಣಿಸಿಯೂ ಹೆಣೆದೂ ಕೊಂಡದ್ದಾಗಿದೆ. ಅವರ ಮಹಾಪ್ರಸ್ಥಾನ ಜೀವದ ಜ್ಞಾನಾವತಾರದ ಉತ್ಥಾನ ಎಂಬ ಪ್ರಭಾವ ಇಲ್ಲಿ ಉದ್ಭವಿಸಿದೆ. ಇದನ್ನು ಸಾವಧಾನ

ದಿಂದಲೂ, ಇಲ್ಲಿಯ ನಿಷ್ಠೆಯ ಸ್ವರೂಪವನ್ನು ಅರಿತುಕೊಳ್ಳಬೇಕೆಂಬ ಕುತ
ಹಲದಿಂದಲೂ ಓದಿಕೊಳ್ಳಬೇಕು. ಈ ಓದಿನಿಂದ ಅವರವರ ಭಾವ
ದ್ದೀಪನವಾದರೆ ಅದೇ ಅದರ ಫಲ. ಇದರೊಳಗಿನ ತಿಳಿಯುವ ಸಾಲುಗಳಿ
ತಿಳಿಯದ ಸಾಲುಗಳಿಗೆ ಸಂಬಂಧ ಹೊಂದಿಸಿಕೊಳ್ಳಬೇಕು. ಆ ವಿಫಲ ಪ್ರಯ
ದಲ್ಲಿಯೂ ಸಾಫಲ್ಯದ ಬೀಜ ಕಾಣಬಹುದೆಂಬ ನಂಬಿಗೆಯಿದೆ.

೧೦. ಒಂದು ಪ್ರಾರ್ಥನೆ.

೧೧. ಮದರ್ ಅವರ ದರ್ಶನಕ್ಕಾಗಿ ನಿರೀಕ್ಷೆಯಲ್ಲಿದ್ದಾಗ ಪ್ರದೀಪ್ತವಾ
ಭಾವಚಿತ್ರ.

೧೨. ಒಂದು ಪ್ರಾರ್ಥನಾಷ್ಟಕ. ತಾಯಿಯವರ ಪಾದಗಳಿಗೆ ಮಾಡಿ
ವಂದನೆ.

೧೩. ಒಂದನ್ನು ಹಲವೊಂದಾಗಿ ತುಂಡರಿಸಿ ಪಾಖಂಡವಾಗಿ ಚಿತ್ರಿಸ
ವದು ದಿತಿಯ ಭಾವ; ದೈತ್ಯ ಮಾರ್ಗ!

ಅ–ದಿತಿ ಅನಂತತೆಯ ಅಸಂಖ್ಯಾತ ಮುಖಗಳಲ್ಲಿ ಏಕಮುಖತೆ
ಮಿಂಚು ಮೂಡಿಸುವ ಆದಿ ಜ್ಞಾನಶಕ್ತಿ. ಭಗವಂತನ ಆ ಭಾಗವತ ಶಕ್ತಿಯನ
ಕುರಿತು. ಇಂದಿನ ಪ್ರಪಂಚದ ಏಕೀಕರಣಕ್ಕೆ ಆ ಶಕ್ತಿಯ ಅಧಿಷ್ಠಾನ ಬೇಕ

೧೪. ಕನಸಿನ ಸಂಚಾರಗಳಲ್ಲಿ ತನ್ನ ಸ್ಥಾಯಿಯೇ ಚ್ಯುತಿಗೊಳ್ಳುವದೊ
ಎಂಬ ಭಯವಿಹ್ವಲ ವಾತ್ಸಲ್ಯಭಾವದಲ್ಲಿ ಬಂದ ಲಾವಣ್ಯಲಹರಿ.

೧೫. ಮನೋನ್ಮನಿಗೆ ಪ್ರಾರ್ಥನೆ. ಉಳಿದ ಮಾತು ಅಲ್ಲಿ
ಮುನ್ನುಡಿಯಲ್ಲಿದೆ.

೧೬. ಮಹಾದರ್ಶನದ ಕಾಲಕ್ಕೆ ತುಡಿಯುವ ಭಾವ–ಬೋಧ.

೧೭. ತನ್ನಲ್ಲಿ ಉದ್ಭವಿಸುವ ಜ್ಞಾನಕ್ಕೆಂತೊ, ಹಾಗೆಯೇ ಭೂತ ದೇ
ಪ್ರಾಣ-ಮನಗಳಿಗೂ ಇವಳೇ ತಾಯಿ. ಜೀವರಥದಲ್ಲಿ ಮೂರ್ತವಾದವಳು
ಭಗವತಿ!

೧೮. ಮದರ್ ಅವರ ಸ್ಮಿತಮುಖ ಭಾವಚಿತ್ರ ಕಂಡಾಗ ಜಗದ್ವಿಖ್ಯಾ
ಲಿಯೊನಾರ್ಡೊ ಡಾ. ವಿನ್ಸಿ ಬರೆದ ಅವರಷ್ಟೇ ಪ್ರಖ್ಯಾತಿಯ "ಮೋನಾಲಿಸಾ
ಚಿತ್ರದ ನೆನಪೂ ಉದ್ದೀಪನ ವಿಭಾವವಾಗಿದೆ ಇಲ್ಲಿ.

೧೯. ತಾಯಿಯವರ ಅದ್ಭುತವಾದ ಉದ್ಭವ ಶಕ್ತಿಯನ್ನು ಕುರಿತು.

೨೦. ತಾಯಿಯವರ ದೃಷ್ಟಿ ಸೋಂಕಿದಾಗಿನ ಎಚ್ಚರ.

೨೧. ಜೀವದ ನೆಲೆಕಟ್ಟುತ್ತಿರುವ ನಾಲ್ಕು ಮಾತೃಶಕ್ತಿಗಳನ್ನು ಸ್ವಾಗತಿಸುವ ಗೀತ.

೨೨. ಸೃಷ್ಟಿಯ ಬಂಧದಲ್ಲಿ ಮುಕ್ತಿವಿಲಾಸದ ಬೀಜವೊಂದು ಬಯ್ತು ಕೊಂಡಿರುತ್ತದೆ. ಅದನ್ನು ಮೊಳಕೆಯೊಡೆಯುವಂತೆ ಮಾಡುವವಳು ಭಗವತಿ. ಅದು ಶ್ರೀಗುರುಕಾರುಣ್ಯ ದೃಷ್ಟಿ.

೨೩. ಆಗಸ್ಟ ೧೫–೧೯೪೭ ಭಾರತ ಸ್ವಾತಂತ್ರ್ಯ ದಿನ; ಅದರಂತೆಯೇ ೧೮೭೨ ಆಗಸ್ಟ ೧೫ ಶ್ರೀ ಅರವಿಂದರ ಜನ್ಮದಿನ. ಅನೇಕ ಉದ್ಧಾರಕ ಘಟನೆಗಳ ದಿನ. ಈ ದಾರಿಯಿಂದ ನಡೆಸಿಕೊಂಡು ಬರುವ ಒಂದು ಸಿಂಹಶಕ್ತಿ ಇದೆ. ಅದು ಶ್ರೀ ಅರವಿಂದರ ಹೃದಯಾರವಿಂದದಲ್ಲಿ ಮೂರ್ತಗೊಂಡದ್ದು. ಅದು ನಾಳಿನ ಜಗತ್ತನ್ನೂ ಜೀವಗಳನ್ನೂ ರೂಪಿಸುವ ಶಕ್ತಿ ಎಂಬ ಭಾವೋನ್ಮಾದದಲ್ಲಿ ಈ ಪ್ರಾರ್ಥನೆ ಅಂಕುರಿಸಿದೆ.

೨೪. ನಿಷ್ಠೆಯ ಭಾವಗೀತ.

೨೫. ಶ್ರೀ ಗುರುವಿನ ಬ್ರಹ್ಮ ಸಮಾಧಿಸ್ಥ ತೇಜಃಪುಂಜಕ್ಕೆ ಆಹ್ವಾನ.

೨೬. ಇಲ್ಲಿಯ ವೈರಿ ಅಧೋಮುಖವಾದ ವೈಪರೀತ್ಯದ ವಿಕೃತಭಾವ.

೨೭. ಸಹಜೀವನಕ್ಕೆ ದಿವ್ಯ ಸಹನೆ ಬೇಕು. ಆ ಪ್ರಾರ್ಥನೆ.

೨೮. ಹೆಳವ ಗಂಡ ಮತ್ತು ಕುರುಡಿ ಹೆಂಡತಿ ಇವರ ಭಿಕ್ಷುಕ ಸಂಸಾರದ ಆರೋಪವನ್ನು ಪ್ರಪಂಚದ ವಿಕೃತ ಜೀವಿತದ ಮೇಲೆ ಮಾಡುವದುಂಟು. ಅದನ್ನು ವಿಡಂಬಿಸಿದ ನುಡಿ.

೨೯. ಶ್ರೀ ವಿವೇಕಾನಂದರು ಮಹಾಕಾಲಿಯನ್ನು ಆಹ್ವಾನಿಸಿದ ಭಾವ ಗೀತ ಇಲ್ಲಿ ಕನ್ನಡಿಸಲಾಗಿದೆ.

೩೦. ಶೈಲಿಯ ಉತ್ಕಟತೆಯಿಂದ ಶೀಲ ಕಟ್ಟುವದಕ್ಕಿಂತ, ಶೀಲದ ಸ್ವಯಂಭಾವದಿಂದ ಶೈಲಿಯ ಶೈಲಶಿಖರವನ್ನೇರಬೇಕು. ಒಂದು ಕೃತಕವು; ವಿಕೃತಿ. ಇನ್ನೊಂದು ಕಲಾತ್ಮಕ; ಸಂಸ್ಕೃತಿ.

೩೧. ಅರ್ಥ ಹೇಳಿದಷ್ಟು ಸ್ಪಷ್ಟವಾಗಿದೆ.

೩೨. ಎದೆಯ ಡವಡವಿಕೆಯಲ್ಲಿ ಇದೆ ಇದೆಯೆಂಬ ಧ್ವನಿ ಸ್ಫುರಿಸಿ
ಬಂದ ಲಹರಿ.

೩೩. ದೇವರ ಸೂತ್ರಧಾರಿತ್ವ, ಜೀವದ ಪ್ರೇಕ್ಷಕಭಾವ ಮೇಳಗೂ
ದಿದ್ದರೆ ಜಗನ್ನಾಟಕದಲ್ಲಿ ರಸವಿಲ್ಲ.

೩೪. ಪೃಥ್ವಿಯಲ್ಲಿ ಗರ್ಭಿತವಾದ ವಸುದೇವಭಾವ ತನ್ನ ಸಂಚಾ
ಯಾತ್ರೆಯಲ್ಲಿಯೂ ಕಳೆದುಕೊಳ್ಳದ ಒಂದು ಅವಿಭಕ್ತಿಯನ್ನು ತೋರಿಸು
ಭಾವವಿರುತ್ತದೆ. ಅದರ ಮಿಂಚು ಜೀವದಲ್ಲಿಯೂ ಪ್ರತಿಬಿಂಬಿಸುವದುಂಟ

೩೫. ಪ್ರಳಯದ ಅದ್ವೈತದಲ್ಲಿ ಸೃಷ್ಟಿಯ ದ್ವೈತ ಮೂಡಿಕೊಂ
ಇರುವದಾಗಿ ಕಾಣುವದು.

೩೬. ಸ್ವ-ಸ್ಥತೆಗಾಗಿ ಪ್ರಾರ್ಥನೆ.

೩೭. ಜೀವದ ಸೋಮಮಂಡಲವೇ ದೇವಾವತಾರದ ನರ್ತನರಂ

೩೮. ಅದ್ಭುತ ದರ್ಶನವು ವೈವುಂಡು ವರ್ಣನಾವೈಖರಿಯಾಗಿ ಇಳಿ
ಬೇಕಾದರೆ ಆ ಧಾರಣೆಗೂ ದಿನ ತುಂಬಬೇಕಾಗುತ್ತದೆ.

೩೯. ಚಿತ್-ಪ್ರಕಾಶದ ವೈಚಿತ್ರ್ಯದ ವಲ್ಲರಿಯ ಹಾಸು-ಬೀಸ
ಕಂಡಾಗ ಇಂದ್ರಜಾಲ ಒಳಗೂ ಹಬ್ಬಿದೆಯೆಂದು ತೋರುವದು. ಅದ
ದಾಟುವದು ಅಷ್ಟು ಸುಲಭವಲ್ಲ.

೪೦. ಅಣುವಿನ ಸಂಹಾರಕಶಕ್ತಿಯಲ್ಲಿ ಸೃಷ್ಟಿಯ ಲೀಲಾವಿಹಾ
ರೂಪರೇಖೆಗಳು ಮಿಂಚುವದುಂಟು.

೪೧. ಪೂರ್ಣತೆಯ ಮಧುರಸವನ್ನು ಕೂಡಿಸುವ ಜೀವದ ಪುರು
ಪ್ರಕೃತಿಭಾವಗಳುಂಟು. ಅದರಲ್ಲಿಯ ಗಂಡು ಪರಮೆ, ಹೆಣ್ಣು ತುಂಬಿ. ಒಂ
ಸೃಷ್ಟಿಯ ಅಂಚಿಗೆ ಹೋದರೆ, ಇನ್ನೊಂದು ಸೃಷ್ಟಿಯ ಕೇಂದ್ರಕ್ಕೆ ಎಳೆಯುವ
ಈ ಎಳೆತ-ಸೆಳೆತಗಳಲ್ಲಿ ಸೃಷ್ಟಿಯ ನವ್ಯ ಲೀಲೆ ತಲೆದೋರುವದು.

೪೨. ಶ್ರೀ ಅರವಿಂದರ ಮತ್ತು ಮಾತೆಯವರ ಸು-ಪ್ರ-ಮಾನಸದ ಅಪ್ರಮೇಯ ಕಿರಣಗಳು ಸೃಷ್ಟಿಮಂಡಳವನ್ನು ಸೇರಿದಾಗ ನಾದವರ್ಣಗಳ ಇನ್ನೊಂದು ಗ್ರಾಮ ತೆರೆಯುವದು. ಅದರ ಸೋಂಕಿಗೆ ಉತ್ತರ ಕೊಡುವ ಶಕ್ತಿ ಇಲ್ಲದವರು ಮನದ ಘನನಿದ್ರೆಯಲ್ಲಿಯೇ ಎಂದಿನಂತೆ ಹಿಂದಿನ ಕನಸು ಕಾಣು ವರು. ಇದು ಮಾನವತೆಯ ಮೌಢ್ಯ.

೪೩. ಆತ್ಮಪ್ರಜ್ಞೆಯ ಸಾಂಖ್ಯಸ್ವರೂಪವನ್ನು ರೂಪಿಸಿಕೊಳ್ಳುವಾಗ ಭಾವದ ಪಡಗರದಲ್ಲಿ ನವೋನವ ಅಲಂಕೃತವಾದ ಪ್ರತಿಮೆ ಒಡಮೂಡುವದು.

೪೪. ದೇಹ, ಪ್ರಾಣ, ಮನ, ವಿಜ್ಞಾನಗಳ ಕೋಟೆ ಭೇದಿಸಿ ಆನಂದದ ಸ್ಪರ್ಶ ಪಡೆಯಬೇಕಾಗುತ್ತದೆ.

೪೫. ಮೇಲ್ಕಾಣಿಸಿದ ಆನಂದ ಜೀವನದಲ್ಲಿಯೂ ಧ್ವನಿಸುವದು. ಆ ಎಳೆಗೆ ಈ ಎಳೆ ಕೂಡಿಸಿ ನೆಯ್ಗೆ ಮಾಡುವದು ಕಷ್ಟ. ಆದರೂ ಅದು ಬಿಟ್ಟ ಕರ್ಮವಲ್ಲ.

೪೬. ಸೃಷ್ಟಿಗೆ ಆಧಾರ ನೀರಂತೆ. ಸೃಷ್ಟಿಯಲ್ಲಿ ಹರಿದಾಡುವ ನೀರು ನ್ನ ಲೀಲಾವಿಲಾಸದಲ್ಲಿ ಅದನ್ನು ವಿವಿಧ ವೈಚಿತ್ರ್ಯದಿಂದ ವ್ಯಂಜಿಸುತ್ತದೆ. ಆ ಸಾತ್ವಿಕ ಭಾವದಲ್ಲಿ ನವಕಂಪನವಿದೆ.

೪೭. ಜಗತ್ತಿನಲ್ಲಿ ತುಂಬಿದ ಸ್ವಾಮಿ ನಮ್ಮ ನಿಮ್ಮಲ್ಲಿಯೂ ತುಂಬಿ ಕೊಂಡಿದ್ದಾನೆ. ಅವ್ಯಕ್ತವನ್ನು ವ್ಯಕ್ತಗೊಳಿಸುವ ಮೂರ್ತಲೀಲೆಯಲ್ಲಿದ್ದಾನೆ. ಆದರ ದ್ರವ್ಯವು ಪ್ರಕಾಶ.

೪೮-೪೯. ಅನೇಕ ಸಲ ಮಾಡಿದ ಪ್ರಾರ್ಥನಾಮುಕ್ತಕಗಳು.

೫೦-೫೫. ಶ್ರೀ ಅರವಿಂದರ 'ಸಾವಿತ್ರಿ' ಎಂಬ ಬ್ರಹ್ಮ-ಕಾವ್ಯದ ಉಕ್ತಿ ಗಳನ್ನು ಮೌಕ್ತಿಕಮಾಲೆಗಳಾಗಿ ಸರಗೊಳಿಸುವ ಪ್ರಯತ್ನವು ವಿಫಲವಾದಾಗ ಒಂದು ಆಯಾಸವಾಯಿತು. ಆ ಆಯಾಸದಿಂದ ಚೇತರಿಸಿಕೊಳ್ಳುವಾಗ ಕೆಲವು ಭಾವಗೀತಗಳು ರೂಪಿಸಿಕೊಂಡವು. ೫೫ರ ವರೆಗಿನ ಭಾವಗೀತಗಳು ಆ ಮಾಲೆಯಲ್ಲಿಯವೇ.

೫೬-೫೭ ಅಲ್ಲಿಯ ಉದ್ಧೃತ ವಚನಗಳಿಂದ ಸ್ಪಷ್ಟವಾಗುವವು.

೫೮. ಗೆಳೆಯ ಶಂಕರಗೌಡ ಪಾಟೀಲ ಇವರು ಪಾಂಡಿಚೇರಿಯಲ್ಲಿ ದೇಹವಿಟ್ಟರು. ಅವರ ಸ್ನೇಹಸಂಬಂಧದಿಂದ ಉದ್ದೀಪ್ತವಾದ ವಿರಹಗೀತವಿದು.

೫೯. ಸಹಭಾವ ಮಂತ್ರದ ಪ್ರತಿಶಬ್ದ ಇಲ್ಲಿದೆ.

೬೦. ಶ್ರೀ ಅರವಿಂದರ ಆಶೀರ್ವಚನವು ಶ್ರೀ ಮಾತೆಯ[illegible]ರ ಕರುಣಾ ಪ್ರಸಾದದಿಂದ ವಾಸುದೇವ–ಜೀವನದತ್ತ ಗಂಗಾವತರಣದಂತೆ ಇಳಿದು ಬರುತ್ತಿದೆ ಎಂಬ ಭೂಕಂಪದ ಆಘಾತ ೨೮ ಫೆಬ್ರುವರಿ ೧೯೫೬ನೆಯ ದಿನ ಬೆಂಗಳೂರತ್ತ ಪ್ರವಾಸ ಮಾಡುವಾಗ ಎಲಹಂಕ ನಿಲ್ದಾಣದ ಬಳಿ ಮೂರ್ತಗೊಂಡು ಭಾವಗೀತವಾಯಿತು.

# ತಿದ್ದುಪಡಿ

| ಪುಟ | [illegible] | ತಪ್ಪು | ಒಪ್ಪು |
| --- | --- | --- | --- |
| ೧ | ೧೪ | ಒಂದಾದೋ ಒಂದಾದ | ಬಂದಾದೋ ಬಂದಾದ |
| ೭೬ | ೪ | ಇಂದೇಂದ್ರಿಯ | ಇಂದ್ರೇಂದ್ರಿಯ |
| ೫೭ | ೪ | ಊದುದಿತೆ | ಊದುತಿದೆ |

# ಹೃದಯಸಮುದ್ರದ

## ಕಠಿನ ಶಬ್ದಾರ್ಥ

ಉರುಳಿ : ಉಂಡೆ
ಚವಲಂಬ : ಎವೆ
ಪಡಸಾದ
ಪಡಿಸಾದ } : ಪ್ರತಿಸದ್ದು, ಪ್ರತಿಧ್ವನಿ.
ವಿಚಿಕೇತಿಸು : ವಿಶೇಷಚಿಕಿತ್ಸೆಮಾಡು
ನೆರೆ,ತ್ರೆರೆ: ಪಕ್ವತೆ,ಪೂರ್ಣತೆ. ಪ್ರಕಟವಾಗು
ಹೂತು : ಹೂವಾಗಿ
ಒಗುಮಿಗಿಸು : ಹೆಚ್ಚಾಗು
ಮಣಿಹ : ಕರ್ತವ್ಯ
ಮರಸಂದು : ನಿಶ್ಚೇಷ್ಟನಾಗಿ
ಮುಸಗಾಡು : ಕ್ರಿಯಾಶೀಲನಾಗು
ನಿನ ಕಾಲ ನೂತು : ನಿನ್ನ ಕಾಲು ನೊಂದುಕೊಂಡು
ಬೀಸು : ವಿಶಾಲ, ಉದ್ದ.
ಕಣಿ : ಕಂಡದ್ದು, ಭವಿಷ್ಯ
ಮಾಳ : ಎತ್ತರಪ್ರದೇಶ
ದೀಧಿತಿ : ಬೆಳಕು
ಸುಟ್ಟುರೆ : ಸುಂಟರಗಾಳಿ

ಹರುಹು : ವಿಸ್ತಾರ
ಪಾಟ : ಹಾಡುವಿಕೆ
ಬಿಸವಂದ : ಆಶ್ಚರ್ಯ
ಪಾಂಗು : ರೂಪು
ಸೆಳಮೆ : ಎಳೆತ
ಕಾರ್ಗಾಲ : ಮಳೆಗಾಲ
ಬೇಳುವೆ : ಯಜ್ಞ
ಕದಿರು (ಧಾ) : ಕಿರಣದಂತೆ ಪ್ರಕಾಶಿಸು
ಕಾತು : ಕಾಯಾಗಿ
ಇರೆ : ಉತ್ತೇಜಕರಸ
ಒಳಲು : ಒಳತಿಳಲು
ಒಳುವು : ರಹಸ್ಯ
ಆಕೆವಾಳ : ಶೂರ
ಮಂತಣ : ಮಂತ್ರಾಲೋಚನ
ಹೇಡಿಮುಣ್ಣು : ಜಿಗುಟಿಲ್ಲದ ಮಣ್ಣು
ದಿಮುಡಿ : ಬಾರಿಸುವ ವಾದ್ಯ
ಸರಿಜೀರು : ತಂತಿಯ ಸಮಶ್ರುತಿ
ಏರುಜೀರು : ಉತ್ಕಟತೆ

---

‘ಅಂಬಿಕಾತನಯದತ್ತ’ರ

# ಕವನ ಸಂಕಲನಗಳು

| | |
|---|---|
| ಸೂರ್ಯಪಾನ .... | ೨—೦—೦ |
| ಹೃದಯಸಮುದ್ರ .... | ೧—೮—೦ |
| ಮುಕ್ತಕಂಠ .... | ೧—೮—೦ |
| ಗಂಗಾವತರಣ .... | ೧—೮—೦ |
| ನಾದಲೀಲೆ .... | ೧—೮—೦ |
| ಮೂರ್ತಿ ಮತ್ತು ಕಾಮಕಸ್ತೂರಿ .... | ೦—೧೨—೦ |
| ಕೃಷ್ಣಾಕುಮಾರಿ ಮತ್ತು ಹಾಡು—ಪಾಡು | ೧—೦—೦ |
| ಮೇಘದೂತ .... | ೧—೦—೦ |
| ಗರಿ .... | ೨—೮—೦ |
| ಸಖೀಗೀತ .... | ೨—೮—೦ |
| ಉಯ್ಯಾಲೆ .... | ೧—೧೨—೦ |

ದೊರೆಯುವ ಸ್ಥಳ :

**ಸಮಾಜ ಪುಸ್ತಕಾಲಯ, ಧಾರವಾಡ.**